# "ಸ್ಥಿತ್ಯಂತರಗೊಳ್ಳುತ್ತಿರುವ ತುಳುನಾಡಿನ ಜನಪದ ಆಟಿ ಆಚರಣೆ"

ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
(ಕನ್ನಡ ವಿಭಾಗ)
ಸಾದರ ಪಡಿಸಿದ ನಿಬಂಧ




ಸಂಶೋಧಕರು

ಆರ್. ದುರ್ಗಾ ಮೆನನ್

ನೋಂದಣಿ ಸಂಖ್ಯೆ : ೧೭೧೧೦೧೦೪೦೦೮೭





ದರ್ಶಕರು

ನಿಕೇತನ

ರು ಕನ್ನಡ ವಿಭಾಗ

ಸರಕಾರಿ ಪ್ರಥಮ ದರ್ಜೆ ಕಾಲೇಜು, ಹಾಗೂ

ಸ್ನಾತಕೋತ್ತರ ಅಧ್ಯಯನ ಕೇಂದ್ರ, ತೆಂಕನಿಡಿಯೂರು ಉಡುಪಿ


೨೦೧೭


ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ,
ಬಲ್ಮಠ, ಮಂಗಳೂರು - ೫೭೫೦೦೧

# "ಸ್ಥಿತ್ಯಂತರಗೊಳ್ಳುತ್ತಿರುವ ತುಳುನಾಡಿನ ಜನಪದ ಆಟ ಆಚರಣೆ"

ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ

(ಕನ್ನಡ ವಿಭಾಗ)

ಸಾದರ ಪಡಿಸಿದ ನಿಬಂಧ





ಸಂಶೋಧಕರು

ಆರ್.ದುರ್ಗಾ ಮೆನನ್

ನೋಂದಣಿ ಸಂಖ್ಯೆ : ೧೩೧೧೦೧೦೩೦೦೪೩

ಮಾರ್ಗದರ್ಶಕರು

ಡಾ। ನಿಕೇತನ

ಮುಖ್ಯಸ್ಥರು ಕನ್ನಡ ವಿಭಾಗ

ಸರಕಾರಿ ಪ್ರಥಮ ದರ್ಜೆ ಕಾಲೇಜು, ಹಾಗೂ

ಸ್ನಾತಕೋತ್ತರ ಅಧ್ಯಯನ ಕೇಂದ್ರ, ತೆಂಕನಿಡಿಯೂರು ಉಡುಪಿ

೨೦೧೭

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ,

ಬಲ್ಮಠ, ಮಂಗಳೂರು – ೫೭೫೦೦೧

# ಪ್ರಮಾಣ ಪತ್ರ

ಕನ್ನಡ ವಿಶ್ವ ವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ "ಸ್ಥಿತ್ಯಂತರಗೊಳ್ಳುತ್ತಿರುವ ತುಳುನಾಡಿನ ಜನಪದ ಆಟ ಆಚರಣೆ" ಎಂಬ ಈ ನಿಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲಶ್ರುತಿಯಾಗಿದೆ. ಕರ್ನಾಟಕ ಥೀಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ನಿಕೇತನ ರವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ನಿಬಂಧವನ್ನು ಬೇರಾವುದೇ ಪದವಿ ಅಥವಾ ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಲಾಭಕ್ಕಾಗಿ ಆರ್ಥಿಕ ಲಾಭಕ್ಕಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢೀಕರಿಸುತ್ತೇನೆ.

ಆರ್. ದುರ್ಗಾ ಮೆನನ್

ಸಂಶೋಧಕರು

## ದೃಢೀಕರಣ ಪತ್ರ

ದುರ್ಗಾ ಮೆನನ್ ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ "ಸ್ಥಿತ್ಯಂತರಗೊಳ್ಳುತ್ತಿರುವ ತುಳುನಾಡಿನ ಜನಪದ ಆಟಿ ಆಚರಣೆ"ಎಂಬ ಶೀರ್ಷಿಕೆಯ ಈ ನಿಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿರುತ್ತಾರೆ. ಈ ನಿಬಂಧವು ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲ ಸ್ವರೂಪವಾಗಿದೆ. ಇವರು ಈ ನಿಬಂಧವನ್ನು ಅಥವಾ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇನ್ನಿತರ ಉದ್ದೇಶಗಳಗಾಗಿ ಬಳಸಿಕೊಂಡಿಲ್ಲ.

ಸ್ಥಳ : ಉಡುಪಿ.

ದಿನಾಂಕ : 25-08-2017

Nkelh

ಡಾ. ನಿಕೇತನ

ಸಂಶೋಧನಾ ಮಾರ್ಗದರ್ಶಕರು

ಡಾ. ನಿಕೇತನ

ಕನ್ನಡ ಸ್ನಾತಕೋತ್ತರ ಅಧ್ಯಯನ ವಿಭಾಗ

ಸರಕಾರಿ ಪ್ರಥಮ ದರ್ಜೆ ಕಾಲೇಜು

ತೆಂಕನಿಡಿಯೂರು ಉಡುಪಿ-576106.

# ಪರಿವಿಡಿ

## ಅಧ್ಯಯನದ ವಿವರಗಳು

ಬೀಡು, ಗುತ್ತು ಮತ್ತು ಬರ್ಕೆ ಮನೆತನಗಳು ಆರ್ಥಿಕ ಅನುಕೂಲದಿಂದಾಗಿ, ಸ್ವಲ್ಪಮಟ್ಟಿಗೆ ಸಂತಸದ ದಿನಗಳನ್ನು ಕಂಡಿದ್ದಾರೆ. ಉಳಿದಂತೆ ಎಲ್ಲಾ ಜನರು ಮಳೆಗಾಲದ ನಾಲ್ಕು ತಿಂಗಳ ಕಾಲ ಅನ್ನ ದಾರಿದ್ರ್ಯದಿಂದ ಬಳಲುತ್ತಿದುದಂತೂ ಸತ್ಯ. ಅದರಲ್ಲೂ ಆಟಿ ತಿಂಗಳು ತುಳುವರಿಗೆ ಕಷ್ಟದ, ಅನಿಷ್ಟದ ಕಾಲ ಎಂದೇ ಜನಜನಿತವಾಗಿದೆ. ಆಟಿ ತಿಂಗಳಲ್ಲಿ ಪರಂಪರಗಾತವಾಗಿ ಕಷ್ಟವನ್ನು ಜನ ಅನುಭವಿಸುತ್ತಿರುವ ಸಂದರ್ಭದಲ್ಲಿ ಅನುಸರಿಸುತ್ತಿದ್ದ ಕೆಲವೊಂದು ಪದ್ಧತಿಗಳು ಕಾಲಕ್ರಮೇಣ ಆಚರಣೆಗಳಾಗಿ ಪರಿವರ್ತನೆಗೊಂಡವು. ಮುಖ್ಯವಾಗಿ ಆಟಿ ತಿಂಗಳಲ್ಲಿ ಕಂಡುಬರುವ ವಿಶಿಷ್ಟ ನಂಬಿಕೆಗಳು, ವಿಶಿಷ್ಟ ಆಚರಣೆಗಳಿಂದಾಗಿ ತುಳುವರಿಗೆ ಅನಿಷ್ಟವೆಂಬ ನಂಬಿಕೆ ಇದ್ದರೂ ಒಂದು ರೀತಿಯ ವಿಶೇಷತೆಯಿಂದ ಎಲ್ಲರ ಗಮನ ಸೆಳೆಯುತ್ತದೆ

ಈ ನಿಟ್ಟಿನಲ್ಲಿ ತುಳುನಾಡಿನ ಪ್ರಮುಖ ಆಚರಣೆಗಳಲ್ಲಿ ಆಟಿ ಆಚರಣೆಯ ಕುರಿತು ತಿಳಿದುಕೊಳ್ಳುವ ಕುತೂಹಲದೊಂದಿಗೆ, ಆಟಿ ಆಚರಣೆ ತುಳುನಾಡಿನಲ್ಲಿ ಸ್ಥಿತ್ಯಂತರಗೊಂಡದ್ದರ ಸ್ವರೂಪದ ಕುರಿತು ವಿಶ್ಲೇಷಿಸಿರುವ ಉದ್ದೇಶದಿಂದ ಸ್ಥಿತ್ಯಂತರಗೊಳ್ಳುತ್ತಿರುವ ತುಳುನಾಡಿನ 'ಆಟಿ ಆಚರಣೆ' ಎನ್ನುವ ಈ ಅಧ್ಯಯನವನ್ನು ನಡೆಸಲಾಗಿದೆ.

## ೨. ಅಧ್ಯಯನದ ಉದ್ದೇಶ :-

ಆಟಿ ತಿಂಗಳಲ್ಲಿ ಮೊದಲ ದಿನದಿಂದ ಕೊನೆಯ ದಿನದವರೆಗೆ ನಡೆಸಲಾಗುವ ಎಲ್ಲ ಆಚರಣೆ ಸಂಪ್ರದಾಯಗಳನ್ನು ಗುರುತಿಸುವ ಪ್ರಯತ್ನ ಮಾಡುವುದು. ಆಟಿ ತಿಂಗಳಲ್ಲಿ ನಡೆಸುವ ಕೆಲವು ವಿಶಿಷ್ಟ ಆಚರಣೆಗಳ ಮಾಹಿತಿಗಳನ್ನು ಸಂಗ್ರಹಿಸುವುದು. ಅದರೊಂದಿಗೆ ಈ ಆಚರಣೆಗಳ ಹಿಂದಿರುವ ಜನಪದರ ಲೋಕದೃಷ್ಟಿಯನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಹಿಂದಿನ ಕಾಲದ ಆಟಿ ಆಚರಣೆಯ ಸ್ವರೂಪ ಇಂದು ಬದಲಾಗಿದೆ. ಕೃಷಿ ಮತ್ತು ಕೃಷಿಗೆ ಪೂರಕವಾದ ಕಸುಬುಗಳನ್ನು ಮತ್ತು ಸಂಬಂಧಿತ ಸಂಸ್ಕೃತಿ ಸಂಪ್ರದಾಯಗಳು ತಮ್ಮ ನೆಲೆಗಳನ್ನು ಕಳೆದುಕೊಳ್ಳುವ ಸಂದರ್ಭದಲ್ಲಿ ಈವರೆಗೆ ಉಳಿದುಕೊಂಡು ಬಂದಂತಹ ಆಚರಣೆಗಳು ಮುಂದಕ್ಕೆ ಹೇಗೆ ಸ್ಥಿತ್ಯಂತರಗೊಳ್ಳುತ್ತವೆ, ಯಾವ ರೂಪ ಪಡೆದುಕೊಳ್ಳುತ್ತದೆ ಯಾವ ಸ್ವರೂಪದಲ್ಲಿ ಪ್ರದರ್ಶಿತಗೊಳ್ಳುತ್ತದೆ ಎಂಬುದನ್ನು ತಿಳಿದುಕೊಳ್ಳುವ ಅಧ್ಯಯನಗಳು ನಡೆಯಬೇಕಿದೆ. ಆಟಿ ಆಚರಣೆ ಸಂದರ್ಭದಲ್ಲಿ ಕಂಡು ಬರುವ ವಿಶೇಷ ನಂಬಿಕೆಗಳು, ಆಚರಣೆಗಳು, ಕುಣಿತಗಳು, ಆಹಾರ ಪದ್ಧತಿಯ ಕ್ರಮಗಳು ಪ್ರದರ್ಶನಗೊಳ್ಳುತ್ತಿರುವ ಆಚರಣೆಗಳು ಹಾಗೂ ಅವುಗಳ ಹಿಂದಿನ ಉದ್ದೇಶವನ್ನು ಕಂಡುಕೊಳ್ಳುವ ಪ್ರಯತ್ನ ಮತ್ತು ಹಿಂದಿನ ಹಾಗೂ ಇಂದಿನ ಆಚರಣೆಗಳಲ್ಲಿರುವ ವ್ಯತ್ಯಾಸಗಳನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನ ಹೊಂದಿದೆ.

ಜನಪದ ಆಟಗಳು ಎಂದರೆ ಮನೋರಂಜನೆಯ ಮಾಧ್ಯಮಗಳೆಂಬ ಸಾಮಾನ್ಯವಾದ ಗ್ರಹಿಕೆಯಿದೆ. ಆಟಿ ತಿಂಗಳನಲ್ಲಿ ವಿಶೇಷವಾಗಿ ಕಂಡುಬರುವ ಆಟಗಳನ್ನು ಆಡುವ ಉದ್ದೇಶ ಕೇವಲ ಸಂತೋಷವನ್ನು ಪಡೆಯುವುದು ಮಾತ್ರವಲ್ಲ. ಅವುಗಳು ಸಮಾಜದಲ್ಲಿ ಪ್ರಚಲಿತವಾಗಿರುವುದಕ್ಕೆ ಸಾಮಾಜಿಕವಾದ ಮತ್ತು ಸಾಂಸ್ಕೃತಿಕವಾದ

ಉದ್ದೇಶಗಳಿವೆ. ಇದರಿಂದ ಆಟಗಳನ್ನು ಕೇವಲ ಮನೋರಂಜನೆಯ ದೃಷ್ಟಿಯಿಂದ ಮಾತ್ರ ಗಮನಿಸದೆ ಅವುಗಳಿಗಿರುವ ಉಳಿದ ಸಂಬಂಧ ಮತ್ತು ಆಯಾಮಗಳನ್ನು ಆಟಿ ಕಾಲದ ಹಿನ್ನೆಲೆಯಲ್ಲಿ ಗಮನಿಸಬೇಕು. ಚೆನ್ನೆಮಣೆ, ತೆಂಗಿನಕಾಯಿ ಆಟ, ಮತ್ತಿತರ ಜನಪದ ಆಟಗಳು ತುಳು ಸಮಾಜದಲ್ಲಿ ಅವುಗಳ ಅನನ್ಯತೆ ಮತ್ತು ಜನಪ್ರಿಯತೆಗಳಿಗೆ ಕಾರಣಗಳೇನು ಎಂಬುವುದನ್ನು ಕಂಡುಕೊಳ್ಳಬೇಕು. ಹೀಗೆ ಆಟಿ ತಿಂಗಳಿನಲ್ಲಿ ಕಂಡುಬರುವ ಇಂಥ ಸಂಸ್ಕೃತಿನಿಷ್ಟ ಆಟಗಳನ್ನು ಅರ್ಥಮಾಡಿಕೊಳ್ಳುವುದು ಈ ಅಧ್ಯಯನದ ಉದ್ದೇಶವಾಗಿದೆ. ಆಟಿ ತಿಂಗಳಿನಲ್ಲಿ ಕಂಡುಬರುವ ಕುಣಿತ ಆಟಿಕಳೆಂಜದ ಅರ್ಥ, ಆತ ಆಟಿ ತಿಂಗಳಿನಲ್ಲಿ ಮನೆಮನೆಗೆ ಹೋಗಿ ಕುಣಿಯುವುದರ ಉದ್ದೇಶ, ಹಾಗೂ ಪ್ರಸ್ತುತ ಆಟಿಕಳೆಂಜ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪಡೆದಿರುವ ಸ್ವರೂಪ. ಇಂದಿಗೂ ಆಟಿ ತಿಂಗಳಿನಲ್ಲಿ ಆಟಿಕಳೆಂಜನ ಪ್ರದರ್ಶನವಿದೆ. ಆಟಿ ಕಳೆಂಜನಿಗೆ ಸಂಬಂಧಿಸಿದಂತೆ ಆಟಿ ತಿಂಗಳಿನ ವಿಶಿಷ್ಟ ಆಚರಣೆಗಳ ಪ್ರಾಮುಖ್ಯತೆಯನ್ನು ವಿವರಿಸುವುದು ಈ ಅಧ್ಯಯನಾದ ಉದ್ದೇಶವಾಗಿದೆ. ಈಗಲೂ ಆಟಿಯ ಎಲ್ಲ ಆಚರಣೆಗಳನ್ನು ತುಳುವರು ಅನುಸರಿಸುತ್ತ ಇದ್ದಾರೆ ಆದರೆ ಅದರ ಅರ್ಥ ಮತ್ತು ಕಾರ್ಯದ ಬಗ್ಗೆ ಅರಿವಿಲ್ಲ. ಆದ ಕಾರಣ ಅದರ ಕುರಿತು ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೊಳಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದೆ.

## ೩. <u>ಅಧ್ಯಯನದ ವ್ಯಾಪ್ತಿ</u> :-

ಕಾಸರಗೋಡಿನ ಚಂದ್ರಗಿರಿ ನದಿಯಿಂದ ಉಡುಪಿಯ ಕಲ್ಯಾಣಪುರ ನದಿಯವರೆಗೆ ವಿಶಾಲವಾದ ಭೌಗೋಳಿಕ ಭೂಪ್ರದೇಶವನ್ನು ತುಳುನಾಡು ಎಂದು ಗುರುತಿಸುತ್ತೇವೆ. ಪ್ರಸ್ತುತ ತುಳುನಾಡು ಎಂಬುವುದು ಕಾಸರಗೋಡು ಹಾಗೂ ಅವಿಭಜಿತ ದ.ಕ. ಜಿಲ್ಲೆ ಅಂದರೆ ಮಂಗಳೂರು ಮತ್ತು ಉಡುಪಿಯನ್ನು ಒಳಗೊಂಡಿರುವ ಪ್ರದೇಶವಾಗಿದೆ.

ತುಳುನಾಡಿನ ಆಟಿ ಆಚರಣೆಯ ಕುರಿತು ಈಗಾಗಲೇ ವಿದ್ವಾಂಸರು ಅನೇಕ ಅಧ್ಯಯನವನ್ನು ಮಾಡಿದ್ದಾರೆ. ಡಾ॥ ವಿವೇಕ ರೈಯವರು ತಮ್ಮ "ಅನ್ವಯಿಕ ಜಾನಪದ"ದಲ್ಲಿ ಆಟಿಕಳೆಂಜ ತಮ್ಮ ಹೊಟ್ಟೆಪಾಡಿಗಾಗಿ ಮನೆ ಮನೆಗೆ ಹೋಗುತ್ತಾರೆ. ತಮ್ಮ ಬಡತನದ ನಿವಾರಣೆಗೆ ಎಂದು ಹೇಳಿದರೆ ಅಭಯ್‌ಕುಮಾರ್ ಕೌಕ್ರಾಡಿಯವರು ಮುಗೇರರ ಜನಾಂಗ ಬಹಳ ದೊಡ್ಡದು ಒಂದೇ ವಠಾರದಲ್ಲಿ ಹಲವರು ವಾಸಿಸುತ್ತಾರೆ. ಆದರೆ ಅವರೆಲ್ಲರೂ ಆಟಿಕಳೆಂಜ ಪ್ರದರ್ಶನ ನೀಡುವುದಿಲ್ಲ. ಇಬ್ಬರು ಮೂವರು ಹೋಗುತ್ತಾರೆ. ಹೀಗಿರುವಾಗ ಇದರಿಂದ ಅವರ ಬಡತನದ ನಿವಾರಣೆ ಸಾಧ್ಯವಿಲ್ಲ. ಅಷ್ಟೇ ಅಲ್ಲದೆ ಮುಗೇರರು ಆಟಿಕಳೆಂಜ ಪ್ರದರ್ಶನ ಸಮಯದಲ್ಲಿ ಸಿಕ್ಕಿದ ಎಲ್ಲ ದವಸಧಾನ್ಯಗಳನ್ನು ಶೇಖರಿಸಿ ಅವರ ಜನಾಂಗಕ್ಕೆ ಕೊನೆಯ ದಿನ ಅನ್ನದಾನ ಮಾಡುತ್ತಾರೆ. ಇದರಿಂದ ಆಟಿಕಳೆಂಜ ವೃತ್ತಿ ಬಡತನ ನಿವಾರಣೆಗೆ ಎಂದು ಭಿನ್ನ ಅಭಿಪ್ರಾಯ ನೀಡುತ್ತಾರೆ. ಈ ವಿಭಿನ್ನ ನಿಲುವುಗಳನ್ನು ಮರುಪರಿಶೀಲಿಸುವುದು ಅಧ್ಯಯನಕ್ಕೊಳಪಡಿಸಬೇಕಾದ ಅಗತ್ಯವಿದೆ. ಆಟಿ ಆಚರಣೆಯನ್ನು ತುಳುವರು ತಮ್ಮೂರಿನಲ್ಲಿ ಮಾತ್ರವಲ್ಲದೆ ಹೊರನಾಡಿನಲ್ಲಿ ಆಚರಿಸುತ್ತಾರೆ. ಇಡೀ ತುಳುನಾಡಿನ ಎಲ್ಲಾ ಪ್ರದೇಶಗಳ ಮಾಹಿತಿ ಸಂಗ್ರಹ ಕಷ್ಟ ಸಾಧ್ಯವಾಗುವುದರಿಂದ ಮಂಗಳೂರು ತಾಲೂಕಿಗೆ ಈ ಅಧ್ಯಯನದ ವ್ಯಾಪ್ತಿಯನ್ನು ಸೀಮಿತಗೊಳಿಸಲಾಗಿದೆ.

ಮಂಗಳೂರಿನಲ್ಲಿ ಆಟಿ ಆಚರಣೆಯ ಸ್ವರೂಪವನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಆಟಿ ಆಚರಣೆಯಲ್ಲಿ ವಿಶೇಷವಾಗಿ ಕಂಡುಬರುವ ಆಟಿ ಅಮಾವಸ್ಯೆಯ ದಿನ ಭೂತಗಳಿಗೆ, ಹಿರಿಯರಿಗೆ ಅಗೆಲು ಬಳಸುವ ಕ್ರಮವನ್ನು ತಿಳಿದುಕೊಳ್ಳಲು ಮಂಗಳೂರಿನ ಸುರತ್ಕಲ್ ಪ್ರದೇಶದ ತೋಕೂರಿನಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಳ್ಳಲಾಗಿದೆ. ಜನಪದ ವಿದ್ವಾಂಸ ಶ್ರೀ ವಾಮನ ನಂದಾವರರನ್ನು ಸಂದರ್ಶಿಸಿ ಮಂಗಳೂರಿನ ದೇರೆಬೈಲ್ ಪ್ರದೇಶದಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಆಟಿಕಳೆಂಜನ ಪ್ರದರ್ಶನ ದಕ್ಷಿಣ ಕನ್ನಡ ಜಿಲ್ಲೆಯ ಕುತ್ತಾರ್‌ನಲ್ಲಿ ಈಗಲೂ ಕಂಡುಬರುತ್ತದೆ. ಕುತ್ತಾರ್ ಪ್ರದೇಶದಲ್ಲಿ ಆಟಿಕಳೆಂಜನ ಕುರಿತು ವಿವರವಾದ ಅಧ್ಯಯನವನ್ನು ಮಾಡಲಾಗಿದೆ. ತೊಕ್ಕೊಟ್ಟಿನ ಚೊಂಬುಗುಡ್ಡೆ, ಹಾಗೂ ಶಕ್ತಿನಗರ, ಬೋಂದೆಲ್ ಪ್ರದೇಶಗಳಲ್ಲಿ ಮಾಹಿತಿ ಸಂಗ್ರಹಿಸಿ ಅಧ್ಯಯನಕ್ಕೆ ಉಪಯೋಗಿಸಲಾಗಿದೆ. ಪ್ರಸ್ತುತ ಆಟಿಯ ಆಚರಣೆಯ ಸ್ವರೂಪ ರೀತಿಯನ್ನು ಕುರಿತು ಅಧ್ಯಯನ ಮಾಡಲು ಕದ್ರಿ ಕಂಬಳ, ಜೆಪ್ಪುವಿನ ಕುಂಟಲ್‌ಪಾಡಿ ಪ್ರದೇಶಗಳಲ್ಲಿ ಮಾಹಿತಿ ಸಂಗ್ರಹಿಸಲಾಗಿದೆ. ಆಟಿ ಆಚರಣೆಯಲ್ಲಿ ಆಟಿ ಕಳೆಂಜ, ಕ್ರೀಡೆ, ನಂಬಿಕೆಗಳು, ಆಹಾರ ಪದ್ಧತಿಗಳು, ಜನಪದರ ಆಚರಣೆಗಳಿಂದ ಅದರದ್ದೇ ಆದ ವಿಶೇಷತೆಯನ್ನು ಪಡೆದಿದೆ. ಶ್ರೀ ವಾಮನ್ ನಂದಾವರ ಹಾಗೂ ಅವರ ಶ್ರೀಮತಿ ಚಂದ್ರಕಲಾ ನಂದಾವರರನ್ನು ಭೇಟಿ ಮಾಡಿದಾಗ ತಮ್ಮ ಮನೆಯ ಮಾಳಿಗೆಯಲ್ಲಿಯೇ ಆಟಿಯ ಕೂಟ ಇಂದಿಗೂ ಅವರು ಮಾಡುತ್ತಾ ಇರುವ ಕುರಿತು, ಹಾಗೂ ಚೆನ್ನಮಣೆ ಆಟದ ವಿವರ ಅಷ್ಟೇ ಅಲ್ಲದೆ ಚೆನ್ನಮಣೆಯನ್ನು ಅವರ ಮನೆಯಲ್ಲೇ ನೋಡುವ ಭಾಗ್ಯವು ಸಿಕ್ಕಿತ್ತು. ಚೆನ್ನೆಮಣೆ ಆಟದ ವಿಶೇಷತೆ, ತಮ್ಮ ಬಾಲ್ಯದ ನೆನಪುಗಳನ್ನು ಹಂಚಿಕೊಂಡರು. ಅವರಿಂದ ಆಟಿಯ ಕುರಿತ ಕೆಲವೊಂದು ಪುಸ್ತಕಗಳು ದೊರಕಿದವು. ಪತ್ರಿಕೆಯಲ್ಲಿ ಆಟಿಯ ಕುರಿತು ಬಂದ ಕೆಲವು ಮಾಹಿತಿಗಳು ಲಭ್ಯವಾದವು. ಚಂದ್ರಕಲಾ ನಂದಾವರರವರು ಆಟಿಯ ತಿಂಡಿ ತಿನಿಸುಗಳ ಮಾಹಿತಿಯನ್ನು ವಿವರವಾಗಿ ನೀಡಿದರು. ಮಂಗಳೂರಿನ ತುಳುಸಾಹಿತ್ಯ ಆಕಾಡೆಮಿಗೆ ಭೇಟಿ ನೀಡಿ ಅಕಾಡೆಮಿಯ ರಿಜಿಸ್ಟ್ರಾರ್ ಶ್ರೀ ಚಂದ್ರಹಾಸ್ ರೈರವರನ್ನು ಸಂದರ್ಶನ ಮಾಡಲಾಯಿತು. ಹಿಂದಿನ ಕಾಲದಲ್ಲಿ ಕೂಡುಕುಟುಂಬ ಇದ್ದು ಆಟಿ ಆಚರಣೆ ಕಟ್ಟುನಿಟ್ಟಾಗಿ ನಡೆಯುತ್ತಿತ್ತು. ಆದರೆ ಈಗ ಕೂಡು ಕುಟುಂಬಗಳೇ ಇಲ್ಲ. ಆಟಿ ಅಮಾವಸ್ಯೆಯ ಮದ್ದು ಪ್ರಕೃತಿಯ ಬದಲಾವಣೆಗಳೆಲ್ಲವೂ ಅಡಕವಾಗಿರುತ್ತದೆ ಎಂದರು. ಆದುದರಿಂದ ಅಧ್ಯಯನದ ವ್ಯಾಪ್ತಿಗೆ ಮಂಗಳೂರಿನ ಕುಲಶೇಖರ, ಕೈಕಂಬ, ವಾಮಂಜೂರು ಕೊಲ್ಯ, ನೀರುಮಾರ್ಗ, ಉರ್ವಸ್ಟೋರ್ ಪಡೀಲ್ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ನಡೆಸಿ ಅಧ್ಯಯನ ಮಾಡಲಾಗಿದೆ. ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ಒಟ್ಟು ತುಳುನಾಡಿಗೆ ಸಂಬಂಧಪಟ್ಟ ಗ್ರಾಂಥಿಕ ಮಾಹಿತಿಯನ್ನು ಅಳವಡಿಸಿಕೊಳ್ಳಲಾಗಿದೆ.

ಪ್ರಸ್ತುತ ತುಳುನಾಡು ದ.ಕ. ಉಡುಪಿ ಮತ್ತು ಕಾಸರಗೋಡು ಜಿಲ್ಲೆಗಳ ಭೌಗೋಳಿಕ ವ್ಯಾಪ್ತಿಯನ್ನು ಹೊಂದಿದೆಯಾದರೂ ಅಧ್ಯಯನದ ಅನುಕೂಲಕ್ಕಾಗಿ ಮತ್ತು ಸಂಶೋಧನೆಯ ಕಾಲಮಿತಿಯನ್ನು ಗಮನದಲ್ಲಿಟ್ಟುಕೊಂಡು ದ.ಕ.ಜಿಲ್ಲೆಯ ಮಂಗಳೂರು ತಾಲೂಕನ್ನು ಪ್ರತಿನಿಧಿಸಲಾಗಿದೆ.

## ೪. ಅಧ್ಯಯನದ ವಿಧಾನಗಳು :-

ಅಧ್ಯಯನದ ವಿಷಯವು ತುಳುನಾಡಿನ ಆಟಿ ಆಚರಣೆ ಆಗಿರುವುದರಿಂದ ಮಂಗಳೂರಿನಲ್ಲಿ ಕ್ಷೇತ್ರ ಕಾರ್ಯವನ್ನು ಮಾಡಲಾಗಿದೆ. ಆಟಿ ಆಚರಣೆಯ ಕುರಿತ ಹಿಂದಿನ ಸ್ವರೂಪವನ್ನು ತಿಳಿಯುವುದಕ್ಕಾಗಿ ವಯಸ್ಸಿನಲ್ಲಿ ಹಿರಿಯರನ್ನು ಹಾಗೂ ವಿದ್ವಾಂಸರನ್ನು ಸಂದರ್ಶಿಸಲಾಗಿದೆ. ಕುಂಪಲದ ನಿವಾಸಿಯಾದ 75 ವರ್ಷದ ಸೀತಮ್ಮ ನಾಯಕ್‌ರವರನ್ನು ಆಟಿ ಕುಲ್ಲುನಿ ಮತ್ತು ಅಗೆಲು ಬಡಿಸುವ ಕ್ರಮಗಳ ಕುರಿತು ಸಂದರ್ಶನ ಮಾಡಲಾಗಿದೆ. ಸೀತಮ್ಮರವರು ಬಹಳ ಉತ್ಸಾಹದಿಂದ ಹಿಂದಿನ ಕಾಲದಲ್ಲಿ ಆಟಿಯ ಸಮಯದಲ್ಲಿ ಜನರು ಆಚರಣೆಗಳನ್ನು ಸಂಪ್ರದಾಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಆದರೆ ಈಗ ಬರೀ ನಾಮಮಾತ್ರ ಅದು ನೆರವೇರುತ್ತದೆ ಎನ್ನುವ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಜನಪದ ವಿದ್ವಾಂಸರಾದ ಡಾ|| ಬಿ.ಎ. ವಿವೇಕ್‌ರೈಯವರನ್ನು ಸಂದರ್ಶನ ಮಾಡಲಾಯಿತು. ಸಂದರ್ಶನ ಸಮಯದಲ್ಲಿ ಆಧುನೀಕರಣದ ಮಾಯೆಯಲ್ಲಿ ಸಿಕ್ಕಿಕೊಂಡ ನಾವು ನಮ್ಮ ಸಂಪ್ರದಾಯಗಳನ್ನು ಮರೆಯುತ್ತಿದ್ದೇವೆ ಎನ್ನುವ ವಿಷಾದ ವ್ಯಕ್ತಪಡಿಸಿದರು. ತುಳು ಸಾಹಿತ್ಯ ಅಕಾಡೆಮಿಯ ಗ್ರಂಥಾಲಯದಲ್ಲಿ ಆಟಿ ಆಚರಣೆಗೆ ಸಂಬಂಧಪಟ್ಟ ಪುಸ್ತಕಗಳನ್ನು ಸಂಗ್ರಹಿಸಲಾಯಿತು.

ತುಳುಪತ್ರಿಕೆ 'ಮದಿಪು' ಹಾಗೂ ಪೂವರಿಗಳಲ್ಲಿ ಆಟಿಯ ಕುರಿತು ಬಂದಿರುವ ಲೇಖನಗಳನ್ನು ಸಂಗ್ರಹಿಸಲಾಗಿದೆ. ಮಹಿಳಾ ಸಂಘಗಳು ಹಾಗೂ ಇನ್ನಿತರ ಸಂಘಟನೆಗಳು ಇಂದಿನ ದಿನಗಳಲ್ಲಿ ಆಟಿ ಆಚರಣೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ರೀತಿಯನ್ನು ವಕ್ತೃಗಳಿಂದ ಕೇಳಿ ಮಾಹಿತಿ ಸಂಗ್ರಹಿಸಲಾಗಿದೆ. ಮಂಗಳೂರು ತಾಲೂಕು ಮಹಿಳಾ ಮಂಡಲಗಳ ಒಕ್ಕೂಟದ ಗೌರವ ಅಧ್ಯಕ್ಷೆ ಶ್ರೀಮತಿ ವಿಜಯಲಕ್ಷ್ಮಿಯವರ ಮನೆಗೆ ಭೇಟಿ ನೀಡಿ ಸಂದರ್ಶನ ಮಾಡಲಾಯಿತು. ಮಂಗಳೂರಿನ ಕಾಲೇಜುಗಳಲ್ಲಿ ಆಯೋಜಿಸಿದ್ದ ಆಟಿಯ ಕೂಟ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಆಟಿಯ ವಿಶಿಷ್ಟ ತಿಂಡಿ ತಿನಿಸುಗಳು ಹಾಗೂ ಆಟಿಯ ವಿಶೇಷತೆಯನ್ನು ಕುರಿತ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಸಂದರ್ಶನ ಸಂದರ್ಭದಲ್ಲಿ ಮಾಹಿತಿಯ ಧ್ವನಿ ಮುದ್ರಣ ಭಾವಚಿತ್ರ ಹಾಗೂ ವಿಡಿಯೋ ಚಿತ್ರೀಕರಣವನ್ನು ಮಾಡಲಾಯಿತು. ಕಾಲೇಜಿನ ಗ್ರಂಥಾಲಯಗಳು ಹಾಗೂ ಉಪನ್ಯಾಸಕರಿಂದ ಮಾಹಿತಿಗಳನ್ನು ಗ್ರಾಂಥಿಕವಾಗಿ ಹಾಗೂ ಮೌಖಿಕವಾಗಿ ದೊರೆತ ಮಾಹಿತಿಗಳನ್ನು ಅಧ್ಯಯನಗಳಲ್ಲಿ ವಿಶ್ಲೇಷಿಸಿ ಅಳವಡಿಸಲಾಗಿದೆ. ಈ ಅಧ್ಯಯನವನ್ನು ಸಾಂಸ್ಕೃತಿಕ ಹಾಗೂ ಪ್ರಾದೇಶಿಕ ಸಂಪ್ರದಾಯದ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಮಾಡಲಾಗಿದೆ.

## ೫. ಅಧ್ಯಯನದ ಸ್ವರೂಪ :-

ಅಧ್ಯಯನದ ವಿಷಯವು ತುಳುನಾಡಿನ ಪ್ರಾದೇಶಿಕ ಸಂಸ್ಕೃತಿಯೊಂದರ ಅನನ್ಯತೆಯನ್ನು ಗುರುತಿಸುವುದಾದ್ದರಿಂದ ಇಲ್ಲಿ ಕ್ಷೇತ್ರಕಾರ್ಯವನ್ನು ವಿಶೇಷವಾಗಿ ಆಧರಿಸಲಾಗಿದೆ. ತಾಜಾ ಮಾಹಿತಿಯನ್ನು ಕಲೆಹಾಕುವ ನಿಟ್ಟಿನಲ್ಲಿ ಹಿರಿಯರನ್ನು, ವಿದ್ವಾಂಸರನ್ನು ಭೇಟಿ ಮಾಡಿ ಅಧ್ಯಯನ ಮಾಡಲಾಗಿದೆ. ಜನಪದರು ನೀಡಿದ

ಮೌಖಿಕ ಮಾಹಿತಿಗಳನ್ನು, ವಿಶ್ಲೇಷಣೆಯ ಸಂದರ್ಭದಲ್ಲಿ ಬಳಸಿಕೊಳ್ಳಲಾಗಿದೆ. ಪೂರಕವಾಗಿ ಮತ್ತು ಆಟಿ ಆಚರಣೆಗಳ ವಿಶ್ಲೇಷಣೆಯ ಭಾಗದಲ್ಲಿ ವಿಶೇಷವಾಗಿ ಬೇರೆ ಬೇರೆ ಗ್ರಂಥಗಳಲ್ಲಿ ದೊರೆತ ಮಾಹಿತಿಗಳ ಆಧಾರದ ನೆಲೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಈ ಅಧ್ಯಯನದ ಹಿನ್ನೆಲೆಯಲ್ಲಿ ತುಳುನಾಡಿನ ಹಲವು ಮಂದಿ ವಿದ್ವಾಂಸರನ್ನು ಸಂಶೋಧಕರನ್ನು ಸಂಪರ್ಕಿಸಲಾಗಿದ್ದು, ಅವರಲ್ಲಿ ಡಾ॥ ಅಮೃತ ಸೋಮೇಶ್ವರ, ಡಾ॥ ವಿವೇಕ್ ರೈ ಶ್ರೀಮತಿ ಸಾಯಿಗೀತಾ, ವಾಮನ್ ನಂದಾವರ, ಚಂದ್ರಕಲ ನಂದಾವರ, ಶ್ರೀ ಮುದ್ದು ಮೂಡುಬೆಳ್ಳೆ, ಶ್ರೀಮತಿ ವಿಜಯಲಕ್ಷ್ಮಿ, ಡಾ॥ ಗಣನಾಥ ಎಕ್ಕಾರ್ ಮೊದಲಾದವರಿಂದ ಮಾಹಿತಿ ಸಂಗ್ರಹಿಸಲಾಗಿದೆ.

ಸೌರಮಾನ ಪದ್ಧತಿ ಪ್ರಕಾರ ನಾಲ್ಕನೇಯ ತಿಂಗಳು ಕರ್ಕಟ ಮಾಸ ಇದನ್ನು ತುಳುನಾಡಿನಲ್ಲಿ "ಆಟಿ" (ಆಷಾಢ) ತಿಂಗಳೆಂದು ಕರೆಯುತ್ತಾರೆ. ಈ ತಿಂಗಳು ಹೇಗೆ ಎಂದರೆ ಹಿಂದೆ ವಿಪರೀತ ಮಳೆ ಸುರಿಯುವ ಕಾಲವಾಗಿತ್ತಂತೆ. ಮಳೆಯೇ ಇಲ್ಲವಾದಲ್ಲಿ ತಡೆಯಲಾರದಂತಹ ಬಿರುಬಿಸಿಲು. ಈ ಕಾರಣಕ್ಕಾಗಿಯೇ 'ಆಟಿದ ದೊಂಬುಗು ಆನೆದ ಬೆರಿಲಾ ಪುಡವು' (ಆಟಿಯ ಬಿಸಿಲಿಗೆ ಆನೆಯ ಬೆನ್ನು ಕೂಡ ಒಡೆದೀತು) ಎಂಬ ಗಾದೆ ಹುಟ್ಟಿಕೊಂಡಿದೆ. ಆಟಿ ತಿಂಗಳ ಮಳೆಗಾಲದಲ್ಲಿ ತುಳುವರು ಅಂಗಳ ಬಿಟ್ಟು ಇಳಿಯಲಾಗದಂತಹ ಪರಿಸ್ಥಿತಿ ಇರುತ್ತಿತ್ತು. ಕೆಲಸ ಕಾರ್ಯಗಳಿಗೂ ಅಡ್ಡಿ ಅಡಚಣೆಗಳುಂಟಾಗಿ ಕಷ್ಟಗಳು ಈ ತಿಂಗಳಲ್ಲಿ ತುಳುವನನ್ನು ಬಿಡುವಂತಿರಲಿಲ್ಲ. ಇದು ಮಳೆಯ ವಿಷಯವಾದರೆ, ಪೂರ್ವೋಕ್ತವಾಗಿರುವ ಗಾದೆಯ ಪ್ರಕಾರ ಮಳೆ ಇಲ್ಲವಾದಲ್ಲಿ ಸಹಿಸಲಾರದ ಬಿಸಿಲಿರುತ್ತಿತ್ತು. ಮಳೆಗಾಲದ ನಡುವೆ ಈ ರೀತಿ ಬಿಸಿಲು ಏರ್ಪಟ್ಟಾಗ ವಾತಾವರಣದಲ್ಲಿ ಏರುಪೇರು ವೈರುಧ್ಯಗಳುಂಟಾಗಿ ರೋಗರುಜಿನಗಳು ಹರಡಿಕೊಳ್ಳುತ್ತವೆ. ಈ ರೀತಿ ರೋಗರುಜಿನಗಳು ಬರುತ್ತಿದ್ದರಿಂದಲೂ ಅನುಕೂಲವಿಲ್ಲದಂತಹ ಹವಮಾನದಿಂದಲೂ ಕೂಡ ಮನೆಬಿಟ್ಟು ಹೊರಗಡೆ ಹೋಗಲು ಅನುಕೂಲವಾಗುವಂತಹ ಪರಿಸ್ಥಿತಿ ಉಂಟಾಗುತ್ತಿತ್ತು. ಮತ್ತೊಂದೆಡೆ ಆ ಕಾಲದಲ್ಲಿ ತೀರಾ ಬಡತನದ ಸಂಡಃರ್ಭ ಕೂಡಾ. ಆಟಿ ತಿಂಗಳಲ್ಲಿ ಅಟ್ಟ ಗುಡಿಸುವ ಕ್ರಮವನ್ನು ಇಟ್ಟುಕೊಂಡಿದ್ದರು. ಹಾಗಾಗಿ "ಆಟಿಡ್ ಅಟ್ಟ ಅಡಿಪೊಡು" (ಆಟಿಯಲ್ಲಿ ಅಟ್ಟ ಗುಡಿಸಬೇಕು) ಎಂಬ ಗಾದೆಯು ಪ್ರಚಲಿತದಲ್ಲಿದೆ. "ಪತ್ತನಾಜೆಯ ದಿನವೇ ಅಟ್ಟದಲ್ಲಿ ಇಟ್ಟಿರುವುದೆಲ್ಲವೂ ಮುಗಿದು ಹೋಗಿರುತ್ತದೆ. ('ತುಳು ಸಂಸ್ಕೃತಿ ಪೊಲಬು', ಡಾ॥ ಪಾ.ರಾ.ಆಚಾರ್) ಕೂಡಿಟ್ಟ 'ಸುಗ್ಗಿ' ಬೆಳೆಯ ಅಕ್ಕಿಯಲ್ಲಿ ಈ ತಿಂಗಳ ವೇಳೆಗೆ ಮುಗಿದಿರುತ್ತದೆ. ಅಂಗಡಿಯಿಂದ ಅಕ್ಕಿ ತರಲು ಹಣವಿರುವುದಿಲ್ಲ. ಹೀಗೆ ಯಾವ ಧವಸ ಧಾನ್ಯಗಳು ಆ ತಿಂಗಳು ಅಟ್ಟವನ್ನು ಸೇರುವುದಿಲ್ಲ. ಅಟ್ಟ ಖಾಲಿಯಾಗಿರುತ್ತದೆ. ಈ ಕಾರಣದಿಂದಲೇ "ಆಟಿಡ್ ಅಟ್ಟ ಅಡಿಪೊಡು" ಎಂಬ ಗಾದೆ ಹುಟ್ಟಿಕೊಂಡಿರಬಹುದು ಈ ಗಾದೆಯನ್ನು ವೈಜ್ಞಾನಿಕ ರೀತಿಯಲ್ಲಿ ಅವಲೋಕನಕ್ಕೊಳಪಡಿಸುವುದಾದರೆ ದವಸ ಧಾನ್ಯಗಳಲ್ಲೆಲ್ಲ ಸಂಗ್ರಹವಾಗಿಟ್ಟುಕೊಳ್ಳುವ ಅಟ್ಟವನ್ನು ಪೂರ್ತಿಯಾಗಿ ವರ್ಷಕ್ಕೊಮ್ಮೆಯಾದರೂ ಸ್ವಚ್ಛ ಮಾಡಿಕೊಳ್ಳಬೇಕು ಎನ್ನುವ ನಿಲುವಿರಬೇಕು. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಮಂಗಳೂರಿನ ಕುತ್ತಾರು ಪ್ರದೇಶಕ್ಕೆ ಭೇಟಿ ಕೊಟ್ಟ ಸಂದರ್ಭದಲ್ಲಿ ಇದೇ ಗಾದೆಯ ಅರ್ಥ ಬರುವಂತೆ ಅವರು "ಆಟಿಡ್ ಪಿದಯಿಪಾಡುನೆ" ಎಂಬುದಾಗಿ ಹೇಳಿದರು. ಮನೆಯನ್ನು ಹಾಗೂ ಮನೆಯ ಅಟ್ಟವನ್ನು ಸ್ವಚ್ಛ ಮಾಡಿ ಬೇಡದ ಕೆಟ್ಟ ಕಲ್ಮಶಗಳನ್ನೆಲ್ಲ ಮನೆಯಿಂದ ಹೊರಗೆ ಹಾಕುವುದು ಎಂಬುದಾಗಿ ಅವರ ಮಾತನ್ನು ವಿವರಿಸಿದರು. ಮೇಲೆ ಹೇಳಿರುವ ಎರಡು ಗಾದೆ

ಮಾತುಗಳಂತೆ ಅದಕ್ಕೆ ಸಮಾನ ಅರ್ಥ ಕೊಡುವಂತೆ ಇನ್ನೊಂದು ಗಾದೆಯನ್ನು ಕಾಣಬಹುದು ಅದ್ಯಾವುದೆದರೆ, "ಆಟಿಡ್ ಅಡಿ ಪೂಜುನೆಲೆಕ್ಕ" ಈ ಕುರಿತಾಗಿ ಸಾಹಿತಿ ವಾಮ ನಂದಾವರರು "ಆಟಿ ತಿಂಗಳು ಕಷ್ಟ ಕಾಲವಂತೆ ಅಕ್ಕಿ ಮುಂತಾದ ಧಾನ್ಯ ಸಂಗ್ರಹ ಬರಿದಾಗುವ ಕಾಲ. ಆಟಿಯಲ್ಲಿ ಅಡಿ ಖಾಲಿಯಾವುದು ಎಂದು (ಆಟಿಡ್ ಅಡಿಪೂಜುನೆಲೆಕ್ಕ). ಇಂತಹ ಕಷ್ಟ ಕಾಲವಾದ ಆಟಿ ತಿಂಗಳನಲ್ಲಿ ದಿನಗಳು ಸಾಗುವುದು ನಿಧಾನ ಎಂದು ತಮ್ಮ ಜನಪದ ಸುತ್ತಮುತ್ತ ಪುಸ್ತಕದ ಉಲ್ಲೇಖಿಸಿದ್ದಾರೆ (1922)

ಆಟಿ ತಿಂಗಳನಲ್ಲಿ ತುಳುವರಲ್ಲಿ ಭಯವು ಮನಸ್ಸಿನಲ್ಲಿ ಮನೆ ಮಾಡುತ್ತಿತ್ತು. ಯಾರು ಹೇಗೆ ಪ್ರಕೃತಿಯ ಕೋಪಕ್ಕೆ ಬಲಿಯಾಗಿ ಬಿಡುತ್ತಾರೋ ಎನ್ನುವ ಆತಂಕವು ಅವರನ್ನು ಆವರಿಸುತ್ತಿತ್ತು. ರೋಗ, ಬಡತನ, ಭಯ ಈ ಮೂರು ಕಾರಣದಿಂದಾಗಿಯೂ ಆಟಿ ತಿಂಗಳು ಒಂದು ರೀತಿಯಲ್ಲಿ ಅತಂತ್ರ ಪರಿಸ್ಥಿತಿಯ ತಿಂಗಳು ಎನ್ನಬಹುದು. ಇದನ್ನು ಕಳೆಯಲೋಸುಗ ಹಿರಿಯರು ಕೆಲವು ಸೂತ್ರಗಳನ್ನು ಹುಡುಕಿಕೊಂಡಿದ್ದರು. ನಿಧಾನಗತಿಯಲ್ಲಿ ಸಾಗುವ ಈ ತಿಂಗಳ ಬೇಸರಿಕೆಯನ್ನು ಕಳೆಯಲು ಚೆನ್ನಮಣೆ ಆಟವಾಡುತ್ತಿದ್ದರು. 'ಕಿರಿಕರಿತ್ತಾಯಗ್ ಆಟಿ, ಸುಖತ್ತಾಯಗ್ ಸುಗ್ಗಿ' (ಕಿರಿಕಿರಿಯವನಿಗೆ ಆಟಿ, ಸುಖಪಡುವವನಿಗೆ ಸುಗ್ಗಿ) ಎಂಬ ಗಾದೆಮಾತು ಬಡವನಿಗೆ ಮತ್ತಷ್ಟು ದರಿದ್ರವನ್ನು ತರುವ ತಿಂಗಳು ಎಂಬುದಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಈ ತಿಂಗಳ ಅನಿಷ್ಟವನ್ನು ನಿವಾರಿಸುವ ಸಲುವಾಗಿ ಕಂಡುಕೊಂಡ ಬೇರೆ ಬೇರೆ ರೀತಿಯ ಪರಿಹಾರ ಮಾರ್ಗಗಳೇ ಆಚರಣೆಗಳಾಗಿವೆ. ಈ ತಿಂಗಳಲ್ಲಿನ ಅನಿಷ್ಟಗಳನ್ನು ದೂರ ಮಾಡುವ ಸಲುವಾಗಿ ಈ ತಿಂಗಳಲ್ಲಿ ತತ್ರ ಹಿಡಿದು ಆಟಿಕಳಂಜ ಬರುತ್ತಾನೆ. ದರಿದ್ರ ಅನಿಷ್ಟ ಕಷ್ಟ ಕಾರ್ಪಣ್ಯಗಳನ್ನು ದೂರ ಮಾಡುವ ಆಟಿ ಕಳಂಜ ಈ ತಿಂಗಳ ಒಡೆಯನಂತೆ ಗೋಚರಿಸುತ್ತಾನೆ. ಮನೆಮನೆಗೆ ಸಂಚರಿಸಿ ತನ್ನ ಪ್ರದರ್ಶನವನ್ನು ನೀಡಿ ಜನರ ಮನದಲ್ಲಿ ಧೈರ್ಯ ತುಂಬುತ್ತಾನೆ. ಆದ್ದರಿಂದ ಆಟಿಕಳಂಜನು ಆಟಿ ತಿಂಗಳಲ್ಲಿ ನಂಬುವ ಅಲೌಕಿಕ ಶಕ್ತಿ ಎಂದು ಹೇಳಬಹುದು. ಆಚರಣಾತ್ಮಕವಾಗಿ ಹೇಳುವುದಾದರೆ ಮುಗೇರ ಹಾಗೂ ನಲಿಕೆಯವರ ಜನಾಂಗದಲ್ಲಿ ಅವರು ಆಟಿ ತಿಂಗಳಲ್ಲಿ ಕಳೆಂಜ ವೇಷವನ್ನು ಧರಿಸಿ ಊರು ಊರು ಸಂಚರಿಸಿ ಮನೆ ಮನಗಳಲ್ಲಿ ಆತ್ಮ ಸ್ಥೈರ್ಯ ತುಂಬುವುದು. ಇದು ಅವರ ಈ ತಿಂಗಳನ ಆಚರಣೆ ಎಂದು ಹೇಳಬಹುದು ಈ ಕುರಿತಾಗಿ ಅಭಯಕುಮಾರ್ ಕೌಕ್ರಾಡಿಯವರ ಸಂಶೋಧನೆ "ಮುಗೇರರು" ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ.

ಆಟಿ ತಿಂಗಳ ವಾಸ್ತವ ಚಿತ್ರಣವೇ ಆಟಿಕಳೆಂಜನ ಸಂಧಿಯಲ್ಲಿ ಕಂಡುಬರುತ್ತದೆ. ಆದುದರಿಂದ ಆಟಿಕಳೆಂಜ, ಆಟಿ ಆಚರಣೆ ಒಂದು ಸ್ವರೂಪವಾಗಿ ಕಾಲಬದ್ಧವಾದ ಆಚರಣಾತ್ಮಕ ಕುಣಿತ ಎಂದು ಸ್ಪಷ್ಟವಾಗುತ್ತದೆ

ಆಟಿ ತಿಂಗಳಲ್ಲಿ "ಆಟಿ ಕುಲ್ಲುನಿ" ಎನ್ನುವ ಆಚರಣಾ ರೂಪದ ಸಂಪ್ರದಾಯವು ಇದೆ. ವರ್ಷವಿಡೀ ಗಂಡನ ಮನೆಯಲ್ಲಿ ಗೇಯುವ ಹೆಣ್ಣುಮಗಳು ಆಷಾಢಕ್ಕೆ ಮನೆಗೆ ಬರುವುದನ್ನು "ಆಟಿ ಕುಲ್ಲುನಿ" ಎಂದು ಹೇಳಬಹುದು. ಹಲವು ವೈಜ್ಞಾನಿಕ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳು ಈ ಸಂಪ್ರದಾಯದಲ್ಲಿ ಅಡಕವಾಗಿದೆ. "ಆಟಿಕುಲ್ಲುನಿ"ಯನ್ನು ಅತ್ಯಂತ ಭಾವನಾತ್ಮಕವಾಗಿ ಇಂದಿಗೂ ಆಚರಿಸಿಕೊಂಡು ಬರುತ್ತಿರುವುದನ್ನು ನಾವು ಗಮನಿಸುತ್ತೇವೆ. (ಆಟಿ ಸೋಣ ಬಿ ಬಾಬು ಅಮೀನ್) (ಪುಟ ಸಂಖ್ಯೆ 20)

ಆಟಿ ತಿಂಗಳ ಒಂದು ಮುಖ್ಯವಾದ ಆಚರಣೆಯೆಂದರೆ "ಆಟಿ ಅಮಾವಸ್ಯೆ" ಎಂದು ಹೇಳಬಹುದು ಆಟಿ ಅಮಾವಾಸ್ಯೆ ಎಂದರೆ ಒಂದಷ್ಟು ಆಚರಣೆಗಳ ನಂಬಿಕೆ ಎಂದು ಹೇಳಬಹುದಾಗಿದೆ. ಯಾಕೆಂದರೆ 'ಆಟಿ ಅಮಾವಾಸ್ಯೆ' ಆಚರಣೆಯ ವಿಧಾನವನ್ನು ಗಮನಿಸುವಾಗ ಐದು ಮುಖ್ಯ ಆಚರಣೆಗಳು ಕಂಡುಬರುತ್ತದೆ.

೧. ಹಾಲೆರಸ ಕುಡಿಯುವುದು

೨. ದಾನ ಬಿಡುವುದು

೩. ತೀರ್ಥಸ್ನಾನ ಮಾಡುವುದು

೪. ಕಳ್ಳಿ/ಕಾಪು ಕುತ್ತುವುದು

೫. ಭೂತಗಳಿಗೆ ಅಗೆಲು ಹಾಕುವುದು. (ತುಳುನಾಡಿನ ಆಚರಣೆಗಳು)

ಆಟಿ ಅಮಾವಾಸ್ಯೆಯಂದು ಹಾಲೆ ಮರದ ರಸ ಕುಡಿದು ಮೆಂತ್ಯೆ ಗಂಜಿ ಉಣ್ಣುವ ಸಂಪ್ರದಾಯ ರೂಢಿ. ಆ ದಿನ ದಾನ ಬಿಟ್ಟು ತೀರ್ಥ ಸ್ನಾನ ಮಾಡುವ ಕ್ರಮವು ಕೂಡ ಅತ್ಯಂತ ಮಹತ್ವದ ಆಚರಣೆಯಂತೆ ಕಂಡುಬರುತ್ತದೆ. ಹಾಗೆಯೇ ತುಳುನಾಡಿನ ಕೃಷಿಕರಿಗೆ 'ಆಟಿ ಅಮಾವಸ್ಯೆ' ಎಂದಾಗ ಕೃಷಿ ಬೇಸಾಯಕ್ಕೆ 'ಕಳ್ಳಿ', 'ಕಾಪು' ಕುತ್ತುವ ನೆನಪು ಉಂಟಾಗುತ್ತದೆ. ಕಳ್ಳಿ – ಕಾಪು ಕುತ್ತುವುದರ ಹಿನ್ನೆಲೆಯೆಂದರೆ ಅದರ ಹಿಂದಿನ ವಿಜ್ಞಾನದ ವಿವರಣೆಗಳೆಂದರೆ ವಿಪರೀತ ಮಳೆಗೆ ಕೃಷಿಗೂ ತಗಲುವ ರೋಗಗಳ ನಿವಾರಣೆಯ ನೆಲೆಯಲ್ಲಿಯೂ 'ಕಳ್ಳಿ' ರೋಗ ನಿರೋಧಕ ಶಕ್ತಿಯಾಗಿ ಕೆಲಸ ಮಾಡುವುದು. ಬೆಳೆಯ ರಕ್ಷಣೆ ಮಾಡುವುದೇ 'ಕಾಪು' ನಿಲ್ಲಿಸುವುದರ ಉದ್ದೇಶ. 'ಕಾಪು'ವಿನಲ್ಲಿ ಹಕ್ಕಿಗಳು ಮರಿ ಮಾಡುತ್ತವೆ. ಈ ಸಂದರ್ಭದಲ್ಲಿ ಹಕ್ಕಿಗಳು ಬೆಳೆಗೆ ತಗುಲಿದ ಹುಳುಹುಪ್ಪಟೆಗಳನ್ನು ತಿಂದು ಬದುಕುತ್ತವೆ. ರೈತರನ್ನು ಬದುಕಲು ಸಹಾಯ ಮಾಡುತ್ತವೆ.

ಆಟಿ ಅಮವಾಸ್ಯೆಯ ಇನ್ನೊಂದು ಪ್ರಮುಖ ಆಚರಣೆಯ ಪ್ರಮುಖ ಆಚರಣೆಯಾದರೆ ಭೂತಗಳಿಗೆ 'ಅಗೆಲು' ಹಾಕುವುದು. ಪಿತೃಗಳಿಗೆ ಅಗೆಲು ಹಾಕುವುದು ಈ ತಿಂಗಳ ಪರಂಪರಾಗತ ಆಚರಣೆಯಾಗಿರುತ್ತದೆ.

ಆಟಿ ತಿಂಗಳ ಕೊನೆಯಲ್ಲಿ ಬರುವಂತಹ ಆಚರಣೆ ನಾಗರಪಂಚಮಿ ಇದು ವೈದಿಕರಿಂದ ಬಂದ ಸಂಪ್ರದಾಯವಾಗಿದೆ. ಅದು ನಾಗನೇ ತುಳುಭೂಮಿಗೆ ಮೂಲ ಎಂಬ ಮಾತಿದೆಯೆಂದು ನಾಗದೇವರಿಗೆ ತನು–ಮನ ತಂಬಿಲಗಳನ್ನು ನಡೆಸಿ ಹಾಲೆರೆದು ಪೂಜಿಸುವರು. ಈ ರೀತಿ ನಾಗನಿಗೆ ಎರೆದ ಹಾಲು ಮಳೆನೀರಿನ ಜೊತೆಯಲ್ಲಿ ಸಮುದ್ರ ಸೇರಿ ಇದರಿಂದ ಬೋರೆಂದು ಹುಚ್ಚೆದ್ದು ಕುಣಿಯುವ ಕಡಲಬ್ಬರವು ಶಾಂತಗೊಂಡು ಮೀನುಗಳು ಮೊಟ್ಟೆಯಿಡಲು ಕಡಲ ಕಿನಾರೆಗೆ ಸೇರುವುದರಿಂದ ಈ ಸಮಯ ಮೀನುಗಾರರಿಗೆ ಸಂಪಾದನೆಯಾಗುವುದು ಎಂಬ ನಂಬಿಕೆಯನ್ನು ಗಮನಿಸಬಹುದು.

ಆಹಾರ ಸಂಗ್ರಹದ ಕೊರತೆ, ಹವಾಮಾನದ ಏರುಪೇರು, ಇದರಿಂದ ಉಂಟಾಗುವ ರೋಗರುಜಿನಗಳು ಮನುಷ್ಯ ಮನಸ್ಸಿನ ದುರ್ಬಲತೆ, ಧಾರಕಾರ ಮಳೆಯ ಜೊತೆಗೆ ಉರಿಬಿಸಿಲು, ಶ್ರಮದ ನಿರ್ವಹಣೆಗೆ ತತ್ತರ, ಇವೆಲ್ಲದರ ಪರಿಣಾಮವಾಗಿ ಆಟಿ ಭಯದ ಮತ್ತು ದಾರುಣತೆಯ ಕಲ್ಪನೆಯನ್ನು ಸೃಷ್ಟಿಸುವುದಲ್ಲದೆ ಈ ಬಗೆಯ ಸ್ಥಿತ್ಯಂತರದಿಂದ ಪಾರಾಗಲು ತಾತ್ಕಾಲಿಕ ಪರಿಹಾರ ಹಾಗೂ ಸಾಂತ್ವನ ಕಂಡುಕೊಳ್ಳುವ ದೃಷ್ಟಿಕೋನದಿಂದ

ಕೆಲವೊಂದು ವಿಧಿನಿಷೇಧಗಳನ್ನು ಹಾಗೆಯೇ ಆರಾಧಾನೆಗಳನ್ನು ತುಳುವರು ನಡೆಸುತ್ತಾರೆ. ಹಾಗಾಗಿ ಇಷ್ಟೆಲ್ಲ ವಿಷಯಗಳು ತುಂಬಿರುವ ಈ ತಿಂಗಳು ನಿಧಾನಗತಿಯಲ್ಲಿ ಸಾಗಿ ತದನಂತರದಲ್ಲಿ ಬರುವ ಸೋಣ ತಿಂಗಳು ಹಬ್ಬಹರಿದಿನಗಳ ಗೌಜಿ ಗಮ್ಮತ್ತಿನಿನಲ್ಲಿ ವೇಗಗತಿಯಲ್ಲಿ ಸಾಗುತ್ತದೆ. ಹಾಗಾಗಿಯೇ "ಆಟಿ ಆಡ ಆಡ, ಸೋಣ ಓಡ ಓಡ" ಎಂಬ ಆಡುಮಾತು ಜನಪದರಿಂದಲೇ ಹುಟ್ಟಿಕೊಂಡಿದೆ. ಈ ಹಿನ್ನೆಲೆಯಲ್ಲಿ ಆಟಿ ತಿಂಗಳು ತುಳುವರು ಪರಿತಪಿಸುವ ನಿಷೇಧದ ತಿಂಗಳು ಹಾಗೂ ಅನಿಷ್ಟದ ಕಾಲವೆಂದರು ತಪ್ಪಾಗಲಾರದು. ಕೃಷಿ ಸಂಸ್ಕೃತಿಯಿಂದ ರೂಪುಗೊಂಡ ತುಳುವರ ಬದುಕಿನಲ್ಲಿ ಆಟಿಗೆ ಬಹಳ ಮಹತ್ವವಿದೆ. ಹಲವು ಸಾತ್ವಿಕತೆಯ ಆಧಾರದ ಮೇಲೆ ಈ ಕಾಲದ ಆಚರಣೆಗಳು ರೂಪುಗೊಂಡಿದ್ದು ಈ ಎಲ್ಲಾ ಆಚರಣೆಗಳ ಮೂಲ ಕೃಷಿ ಸಂಸ್ಕೃತಿ ಎಂದರೆ ಅತಿಶೋಕ್ತಿಯಾಗಲಾರದು.

**ಈ ಅಧ್ಯಯನದಲ್ಲಿ ಈ ಕೆಳಕಂಡಂತೆ ಅಧ್ಯಯನಗಳನ್ನು ಗುರುತಿಸಲಾಗಿದೆ.**

೧. ತುಳುನಾಡಿನ ಆಟಿ ಆಚರಣೆಯ ಸ್ವರೂಪ ಮತ್ತು ವಿಶ್ಲೇಷಣೆ

೨. ಕುಣಿತಗಳು ವಿಶೇಷವಾಗಿ ಆಟಿಕಳಂಜ ಕುಣಿತದ ವಿಶ್ಲೇಷಣೆ

೩. ಆಟಿಯ ಜನಪದ ಕ್ರೀಡೆಗಳು

೪. ಆಟಿ ಆಚರಣೆಗೆ ಸಂಬಂಧಿಸಿದ ನಂಜಿಕೆಗಳ ವಿಶ್ಲೇಷಣೆ

೫. ಆಟಿ ಆಚರಣೆಯ ಆಹಾರ ಪದ್ಧತಿಗಳು/ಆಟಿ ಆಚರಣೆಯ ಮದ್ದು

೬. ಸ್ಥಿತ್ಯಂತರಗೊಳ್ಳುತ್ತಿರುವ ಮಂಗಳೂರಿನ ಆಟಿ ಆಚರಣೆಯ ಸ್ವರೂಪ.

# ಅಧ್ಯಾಯ – 2

## ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ತುಳುನಾಡಿನ ಸಂಪ್ರದಾಯ ಆಚರಣೆಗಳ ಕುರಿತು ಈಗಾಗಲೇ ಹಲವಾರು ಹಿರಿಯ ವಿದ್ವಾಂಸರು, ಬಹಳಷ್ಟು ಅಧ್ಯಯನ ನಡೆಸಿದ್ದಾರೆ. ಅದರಲ್ಲೂ ವಿಶೇಷವಾಗಿ ಈ ಬಗ್ಗೆ ಗ್ರಂಥಗಳು ಹಾಗೂ ಲೇಖನಗಳು ಪುಸ್ತಕಗಳು ಬಂದಿದೆ.

೧. ಡಾ॥ ಗಣನಾಥ ಎಕ್ಕಾರು ಇವರು ತಮ್ಮ ತುಳುನಾಡಿನ ಜನಪದ ಆಟಗಳು ಎಂಬ ಸಂಶೋಧನಾ ಗ್ರಂಥದಲ್ಲಿ ತುಳುನಾಡಿನ ಸಂಸ್ಕೃತಿಯೊಂದಿಗೆ ಅನ್ಯೋನ್ಯ ಸಂಬಂಧವನ್ನು ಹೊಂದಿರುವ ಮತ್ತು ತುಳುನಾಡಿನಲ್ಲಿ ಜನಪ್ರಿಯವಾಗಿರುವ ಹತ್ತು ಜನಪದ ಆಟಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ರಾಚನಿಕ ಸಿದ್ಧಾಂತವನ್ನು ಜನಪದ ಆಟಗಳಿಗೆ ಅನ್ವಯಿಸಿ ಅಧ್ಯಯನ ಮಾಡಿದ್ದಾರೆ. ತುಳುನಾಡಿನ ಜನಪದ ಆಟಗಳನ್ನು ಸಮಗ್ರ ದೃಷ್ಟಿಯಿಂದ ಅಧ್ಯಯನ ಮಾಡಿ, ಮೌಲ್ಯವನ್ನು ಸ್ಪಷ್ಟೀಕರಿಸಿಕೊಂಡು ಅವುಗಳ ವೈಜ್ಞಾನಿಕ ಸಂಗ್ರಹ, ಆಳವಾದ ಅಧ್ಯಯನ, ಅನ್ವಯಿಕ ಪರಿಣಾಮಗಳನ್ನು ಕಂಡುಕೊಂಡು ಶಿಕ್ಷಣದಲ್ಲಿ ಬಳಸಿಕೊಳ್ಳುವ ಬಗ್ಗೆ ತಮ್ಮ ಸಂಪ್ರಬಂಧದಲ್ಲಿ ವಿವರವಾಗಿ ವಿಶ್ಲೇಷಿಸಿದ್ದಾರೆ. ತುಳುನಾಡಿನ ಜನಪ್ರಿಯ ಒಳಾಂಗಣ ಆಟ ಚೆನ್ನೆಮಣೆ, ತುಳುನಾಡಿನ ಸಾಂಸ್ಕೃತಿಕ ಬದುಕಿನ ವಿವರಗಳು ಚೆನ್ನೆಮಣೆ ಆಟದಲ್ಲಿ ಅಭಿವ್ಯಕ್ತಿಗೊಂಡ ಬಗೆಯನ್ನು ವಿಶ್ಲೇಷಿಸಿದ್ದಾರೆ.

೨. ಡಾ॥ ಅಭಯ್ ಕುಮಾರ್ ಕುಕ್ರಾಡಿಯವರು "ಮುಗೇರರು" ಎಂಬ ಸಂಶೋಧನ ಗ್ರಂಥದಲ್ಲಿ ಆಟಿ ಕಲೆಂಜ ಮತ್ತು ಆಚರಣೆಯ ಸಾಮಾನ್ಯ ಸ್ವರೂಪ, ಆಟಿ ಕಲೆಂಜದ ಪ್ರದರ್ಶನ ಸ್ವರೂಪ, ಆಟಿ ಕಲೆಂಜದ ಪಠ್ಯ ಮತ್ತು ಆಟಿ ಪ್ರದರ್ಶನ, ಆಟಿಕಲೆಂಜದ ಭಿನ್ನಪಾಠಗಳು ಹಾಗೂ ಆಟಿಕಲೆಂಜದ ಅರ್ಥಗಳ ಕುರಿತಾಗಿ ವಿವರಾತ್ಮಕಾಗಿ ಮಾಹಿತಿ ನೀಡಿದ್ದಾರೆ.

ಈ ಗ್ರಂಥದಲ್ಲಿ ಡಾ। ಕೆ ಅಭಯ ಕುಮಾರ್‌ರವರು ತುಳುನಾಡಿನ ಮುಗೇರರ ಆಚರಣೆ ಮತ್ತು ಕುಣಿತಗಳ ಸಂಬಂಧ ಜಾನಪದ ದೃಷ್ಟಿಯಿಂದ ವಿಶ್ಲೇಷಿಸಿದ್ದಾರೆ. ಕಡೆಗಣಿಸಲ್ಪಟ್ಟ ದಲಿತ ಸಂಸ್ಕೃತಿಯನ್ನು ಜಾನಪದದ ಮೂಲಕ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ ಒಂದು ಶಾಸ್ತ್ರೀಯ ಅಧ್ಯಯನ ಕೃತಿ ಮುಗೇರರು – ಜನಾಂಗ ಜಾನಪದ ಅಧ್ಯಯನ.

೩. ಡಾ॥ ದಿವಾ ಕೊಕ್ಕಡರವರು ತುಳುನಾಡಿನ ಆಚರಣೆಗಳು ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ ಎನ್ನುವ ಮಹಾ ಪ್ರಬಂಧ ಮಂಡಿಸಿರುತ್ತಾರೆ. ಇವರು ವಾರ್ಷಿಕ ಆವರ್ತನದ ಕುರಿತು ಇಲ್ಲಿ ವಿವರಗಳನ್ನು ಬಹಳ ವಿವರವಾಗಿ ನೀಡಿದ್ದಾರೆ. ತುಳುನಾಡಿನ ಆಚರಣೆಗಳು ಒಂದು ಉತ್ತಮ ಚಿತ್ರಣ ಇಲ್ಲಿದೆ.ಆದರೆ ಇಲ್ಲಿ ಜೀವನಾವರ್ತನ ಆಚರಣೆಗಳನ್ನು ಸಂಪೂರ್ಣವಾಗಿ ನೋಡಲಾಗಿಲ್ಲ. ಆಟಿ ಅಮಾವಾಸ್ಯೆಯನ್ನು ಮುಖ್ಯವಾಗಿ ಇಟ್ಟುಕೊಂಡು ಅದರ ಆಚರಣೆಯ ಸ್ವರೂಪವನ್ನು ಕ್ವಚಿತ್ತಾಗಿ ವಿಶ್ಲೇಷಿಸಲಾಗಿದೆ.

೪. ಹಿರಿಯ ಜನಪದ ವಿದ್ವಾಂಸರಾದ ಬನ್ನಂಜೆ ಬಾಬು ಅಮೀನ್ ಇವರು 'ಆಟಿ ಸೋಣ' ಎನ್ನುವ 31 ಪುಟಗಳ ಪುಟ್ಟ ಕೈಪಿಡಿಯನ್ನು ಹೊರತಂದಿದ್ದಾರೆ. ಆಟಿ ಮತ್ತು ಸೋಣ ಎರಡು ತಿಂಗಳಲ್ಲಿ ಆಚರಿಸುವ ಸಾಂಪ್ರದಾಯಿಕ ಆಚರಣೆಗಳ ಕುರಿತು ವಿವರಿಸಲಾಗಿದೆ. ಇಲ್ಲಿನ ಆಟಿ ಸೋಣದ ಕುರಿತ ವಿಚಾರಗಳು ಯುವ ವಿದ್ವಾಂಸರ ಅಧ್ಯಯನ ಸಂಬಂಧಿ ಯೋಜನೆಗಳಿಗೆ ಸಹಕಾರಿಯಾಗಿದೆ. ಆದರೆ ಆಹಾರ ಮಾರಿದೇವ, ಆಟಿದಗೊಬ್ಬು, ಆಟಿ ಕುಲ್ಲುನು, ನಾಗರ ಪಂಚಮಿ ಆಚರಣೆಗಳ ಕುರಿತು ಮಾಹಿತಿ ಇದೆ ಹೊರತು ಅದರ ವಿಶ್ಲೇಷಣೆಯಿಲ್ಲ.

೫. ಡಾ। ವಿವೇಕ್‌ರೈರವರ 'ಅನ್ವಯಿಕ ಜಾನಪದ' ಕೃತಿಯಲ್ಲಿ ಆಟಿ ಕಳಂಜ ಪಾಡ್ದನದ ಮೂಲ ತುಳುವಿನ ಕನ್ನಡ ಅನುವಾದವನ್ನು ಕೊಡಲಾಗಿದೆ ಇದೊಂದು ಅಧ್ಯಯನಾತ್ಮಕ ಲೇಖನ.

೬. ತುಳುವೆರ ತೆನೆಸ್ ಅಸರ್‌ದ ಪೊರ್ಲು ತೆರ್ಲ್ – ಡಾ। ಸಾಯಿಗೀತಾ ಇಲ್ಲಿ ಆಟಿ ತಿಂಗಳ ಆಹಾರದ ಕುರಿತ ಮಾಹಿತಿಯನ್ನು ನೀಡಿದ್ದಾರೆ.

೭. ಉಡಲ್ ತುಳು ತ್ರೈಮಾಸಿಕ ಪತ್ರಿಕೆ (ಮೇ, ಜೂನ್, ಜುಲಾಯಿ 2016 ಸಂಪು –7 ಸಂಚಿಕೆ –3 ಇದರಲ್ಲಿ ಎನ್.ಪಿ.ಶೆಟ್ಟಿ ಮುಲ್ಕಿ ಇವರು "ತುಳುನಾಡ್‌ದ ಆಟಿ ತಿಂಗೊಲು" ಎನ್ನುವ ಲೇಖನವನ್ನು ಬರೆದಿದ್ದಾರೆ.

೮. ಪೂವರಿ ತಿಂಗೊಲ್ದ ತುಳುಪತ್ರಿಕೆ (ಜುಲೈ 2016 ಸಂಪುಟ –3 ಸಂಚಿಕೆ –1ರಲ್ಲಿ ರಮ್ಯಶ್ರೀ) (ಸರಸ್ವತಿ ವಿದ್ಯಾಮಂದಿರ ನರಿಮೊಗರು)ರವರು 'ಆಟಿ ಬತ್ತ್ಂಡ್ ಆಟಿ ಎನ್ನುವ ವಿಶೇಷ ಲೇಖನವನ್ನು ಬರೆದಿದ್ದಾರೆ.

೯. ಅರವಿಂದ ಮಾಲಗತ್ತಿ (ತುಳುವರ ಆಟಿ ಕಳಂಜ) (ಅಂತರಾಷ್ಟ್ರೀಯ ಸಂಶೋಧನೆ) ಆಟಿ ಕಳೆಂಜದ ವಿವರಣೆಯೊಂದಿಗೆ ನಂಬಿಕೆ ಸಂಪ್ರದಾಯಗಳನ್ನು ಪಟ್ಟಿ ಮಾಡಿದ್ದಾರೆ.

೧೦. ಟಿ.ಎಂ.ಪೈ ಅಭಿನಂದನಾ ಗ್ರಂಥ : ಸುದರ್ಶನ ಸಂ ಅಡ್ಯನಡ್ಕ ಕೃಷ್ಣಭಟ್ಟ ಆಟಿ ತಿಂಗಳ ಪರಿಸರ ಬದಲಾವಣೆಯ ಕುರಿತು ಇಲ್ಲಿ ಮಾಹಿತಿಯನ್ನು ಕಾಣಬಹುದು.

೧೧. ರಾಣಿ ಅಬ್ಬಕ್ಕ ತುಳು ಅಧ್ಯಯನ ಕೇಂದ್ರ 2014ರಲ್ಲಿ ಪ್ರಕಟವಾದ 'ಸಿರಿ ಸಂಪದ' ಲೇಖನ ಸಂಗ್ರಹ ಇದರಲ್ಲಿ ಪೂವಪ್ಪ ಕಣಿಯವರು 'ಅಳಿವಿನಂಚಿನಲ್ಲಿರುವ ತುಳು ಜನಪದ ಕುಣಿತಗಳು' ಎಂಬ ಲೇಖನದಲ್ಲಿ ಆಟಿ ಕಳಂಜವನ್ನು ವಿಶ್ಲೇಷಿಸಿದ್ದಾರೆ.

೧೨."ಯು.ಪಿ ಉಪಧ್ಯಾಯರವರು ತಮ್ಮ "Folk Rituals of the Tuluva region of Coastal Karnataka" ಎಂಬ ಪುಸಕದಲ್ಲಿ (2002) The cult also provides very useful material for studying folk theatrical and ritual models along with all paraphernalia associated with them like music, dance, makeup, stage craft, oracle, dialogue, gestures etc. The ritual can be performed on any auspicious day of the year excepting in the solar month of Karnataka (July August) ಎಂದು ಹೇಳಿರುತ್ತಾರೆ.

೧೩. "ಆಟಿ ಎಂಬ ಶೀರ್ಷಿಕೆಯ ಕವನದಲ್ಲಿ ಶ್ರೀಯುತ ಕೃಷ್ಣಪ್ರಸಾದ್ ಕುಂಬ್ಳೆಯವರು ಆಟಿ ತಿಂಗಳ ಕಳೆಂಜನ ನಲಿಕೆ, ಹಾಲೆ ಮರದ ಔಷಧೀಯ ಗುಣ, ಅಮಾವಸ್ಯೆಯ ಸ್ನಾನ, ಜನಪದ ನಲಿಕೆ, ಆಟಿ ತಿನಿಸುಗಳು, ರೈತರ ಬದುಕು ಪಿತೃಗಳನ್ನು ನೆನಪಿಸುವುದು ಆಟಿಯ ಆಟಗಳು ಇವೆಲ್ಲವೂ ಭೂಮಿಗೆ ಇಳಿದು ಬಂದಿದೆ ಎಂದು ಅಚ್ಚ ತುಳುಭಾಷೆಯಲ್ಲಿ ಸ್ವಚ್ಛವಾಗಿ ವಿವರಿಸಿದ್ದಾರೆ (ಪು.ಸಂ. 114)

೧೪. ಡಾ। ಕೆ. ಚಿನ್ನಪ್ಪ ಗೌಡರು ತಮ್ಮ "ಸೇರಿಗೆ" ಎನ್ನುವ 371 ಪುಟಗಳ ಗ್ರಂಥದಲ್ಲಿ ಅಮಾವಸ್ಯೆಯ ಪ್ರಭೇಧಗಳು ಎನ್ನುವ ಶೀರ್ಷಿಕೆಯಡಿಯಲ್ಲಿ ಆಟಿ ಅಮವಾಸ್ಯೆಯ ಕುರಿತಾಗಿ ಒಂದು ಪುಟಕ್ಕೆ ಮೀರದಂತೆ ಸಂಕ್ಷಿಪ್ತ ವಿವರಣೆಯನ್ನು ನೀಡಿರುತ್ತಾರೆ. (ಪು.ಸಂ 304)

೧೫. ಹಿರಿಯ ಸಾಹಿತಿ ಡಾ। ಪಾಲ್ತಾಡಿ ರಾಮಕೃಷ್ಣ ಆಚಾರ್‌ರವರು "ತುಳು ಸಂಸ್ಕೃತಿದ ಪೊಲಬು" ಎಂಬ ತುಳು ಪುಸ್ತಕದಲ್ಲಿ ಆಟಿ ಅಮಾವಸ್ಯೆಯ ವಿಚಾರಗಳ ಕುರಿತು ಅದರ ಸಂಪೂರ್ಣ ಸ್ವರೂಪವನ್ನು ವಿವರಿಸಿ ಮಾಹಿತಿ ನೀಡಿದ್ದಾರೆ.

೧೬.ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಯ ವತಿಯಿಂದ ಪ್ರತೀತಿಯಲ್ಲಿರುವ ತ್ರೈಮಾಸಿಕ "ಮದಿಪು" ಇದರಲ್ಲಿ ಹಲವು ವರ್ಷಗಳಿಂದ ತುಳುವಿನ ಕುರಿತಾದ ಲೇಖನಗಳಲ್ಲಿ ಪ್ರಕಟಗಳೊತ್ತಿವೆ. ಹಲವು ಭಾರೀ ವಿವಿಧ ವಿವಿಧ ಹೆಸರಾಂತ ಸಾಹಿತಿಗಳು ಈ ತ್ರೈಮಾಸಿಕದಲ್ಲಿ ಆಟಿಯ ಕುರಿತಾಗಿ ಬರೆದಂತಹ ಲೇಖನಗಳು, ಕವಿತೆಗಳು ಈ ಪುಸ್ತಕದಲ್ಲಿ (ತ್ರೈಮಾಸಿಕ) ಪ್ರಕಟಗೊಂಡಿದೆ.

ಆಟಿಯ ಭಾರೀ ಮಳೆಯ ಕುರಿತು ಶ್ರೀಯುತ ಸುಮಂತ್ ಶೆಟ್ಟಿಯವರು "ಕುದ್ಕಗ್ ಮದಿಮೆಗೆ"... ಎನ್ನುವ ಶೀರ್ಷಿಕೆಯನ್ನಿಟ್ಟು ಕವಿತೆಯನ್ನು ಬರೆದಿದ್ದಾರೆ.

೧೭. ಭಾಸ್ಕರ ರೈ ಕುಕ್ಕುವಳ್ಳಿಯವರು ಆಟಿಯಿಂದ ಸೋಣದವರೆಗಿನ ವಿಷಯಗಳನ್ನು 'ಆಟಿದ ಮಲಕಂತ' ಎನ್ನುವ 5 ಚರಣಗಳ ಪದ್ಯವನ್ನು ಉತ್ತಮ ರೀತಿಯಲ್ಲಿ ಬರೆದಿರುತ್ತಾರೆ. (2011)

೧೮. ಕೆ. ರಾಜೇಂದ್ರ ಅಡಿಗರು ಬರೆದಂತಹ "ತುಳುವೆರ್" ಎನ್ನುವ ಪದ್ಯದಲ್ಲಿ ಮೂರನೆಯ ಚರಣದಲ್ಲಿ ಆಟಿಯ ಕುರಿತಾಗಿ ಬರೆದಂತಹ ಸಾಲುಗಳನ್ನು ಗಮನಿಸಿದ್ದರೆ ತುಳುವರ ಆಚರಣೆಗಳಲ್ಲಿ ಸಂಸ್ಕೃತಿಯ ಆಟಿ ಆಚರಣೆಗೆ ಎಂಥಹ ಮಹತ್ತರ ಸ್ಥಾನವಿದೆ ಎಂಬುದನ್ನು ಅರ್ಥೈಸಿಕೊಳ್ಳಬಹುದಾಗಿದೆ. (2008)

೧೯. ಡಾ।ವಾಮನ ನಂದಾವರರು ಆಟಿ ತಿಂಗಳ ಹಬ್ಬದ ಕುರಿತಾಗಿದೆ. "ನಾಗರಪಂಚಮಿ ಆಟಿ ಅಮಾವಸ್ಯೆ" ಎಂಬ (2004) ಶೀರ್ಷಿಕೆಯಡಿಯಲಿ ಪೂರ್ಣ ಮಾಹಿತಿಯೊಂದಿಗೆ ಬರೆದಿರುತ್ತಾರೆ. ಕೆ.ಕೆ.ಗಟ್ಟಿಯವರು ಬರೆದ "ಆಟಿದ ಮರ್ಯಾಲ" ಎನ್ನುವ ಪದ್ಯದಲ್ಲಿ ಆಟಿ ತಿಂಗಳನಲ್ಲಿ ಬರುವ ಮಳೆಗಾಲದಲ್ಲಿ ತುಳುವರಿಗೆ ಉಂಟಾಗುವ ಕಷ್ಟನಷ್ಟಗಳ ಕುರಿತು ಹೇಳಿದ್ದಾರೆ. (2003) "ತುಳುವೆರೆ ಆಟಿ ತಿಂಗಳು" ಎಂಬ ಲೇಖನದಲ್ಲಿ ಲಲಿತಾ ರೈಯವರು ಆಟಿ ತಿಂಗಳ ಆಗುಹೋಗುಗಳ ಕುರಿತು ವಿವರಿಸಿ ಆ ತಿಂಗಳ ಚಟುವಟಿಕೆಗಳನ್ನು ಪರಿಚಯಿಸಿದ್ದಾರೆ (2001).

೨೦. ಎಂ.ಜಾನಕಿ ಬ್ರಹ್ಮಾವರರು "ಆಟಿಡೊಂಜಿ ದಿನ" ಎನ್ನುವಂತಹ ಆಟಿಯ ಕುರಿತಾಗಿ ಚಿಕ್ಕದಾದರೂ ಚೊಕ್ಕವಾದಂತಹ ಕಥೆಯನ್ನು ಅದ್ಭುತವಾಗಿ ಬರೆದಿರುತ್ತಾರೆ (1998).

೨೧. 1996ರ ಆಟಿ ಸೋಣ ನಿರ್ನಾಲ ತ್ರೈಮಾಸಿಕದಲ್ಲಿ ಆರಂಭದ ಪುಟಗಳಲ್ಲಿಯೇ ಆಟಿದ ಅಗೆಲ್ - ಸೋಣದ ಪರ್ಬೊ' ಎನ್ನುವ ಲೇಖನ ಸಿಗುತ್ತದೆ.

೨೨. ಶ್ರೀಯುತ ವಾಮನ ನಂದಾವರರವರು (ಕೆಲವು ನೋಟಗಳು) ಬರೆದ 1992ರಲ್ಲಿ ಪ್ರಕಟವಾದ ಜನಪದ ಸುತ್ತಮುತ್ತ (ಕೆಲವು ನೋಟಗಳು) ಎಂಬ ಅಂಕಣದಲ್ಲಿ ಆಟಿ ತಿಂಗಳ ತುಳುವರು ಎಂಬ ಶೀರ್ಷಿಕೆಯಡಿಯಲ್ಲಿ ಮೂರು ಪುಟಗಳನ್ನು ಮೀರಿದ ಸಂಕ್ಷಿಪ್ತವಾದ ಮಾಹಿತಿಯನ್ನು ಆಟಿ ತಿಂಗಳ ಬಗ್ಗೆ ನೀಡಿದ್ದಾರೆ.

೨೩. ತುಳು ಸಾಹಿತ್ಯ ಚರಿತ್ರೆ (2007)

ಪ್ರಧಾನ ಸಂಪಾದಕರು - ಡಾ। ಬಿ.ಎ. ವಿವೇಕ್ ರೈ

ಪ್ರಸರಾಂಗ (ಕನ್ನಡ ವಿಶ್ವವಿದ್ಯಾನಿಲಯ, ಹಂಪಿ)

1119 ಪುಟಗಳ ಪುಸ್ತಕದಲ್ಲಿ ಆಟಿ ಆಚರಣೆಯ ಒಂದು ಭಾಗವಾಗಿರುವ ಆಟಿ ಕಳೆಂಜದ ಕುರಿತ ಮಾಹಿತಿಯನ್ನು ಡಾ। ಬಿ.ಎ. ವಿವೇಕ್ ರೈ ನೀಡಿರುತ್ತಾರೆ.

ಪುಟ ಸಂಖ್ಯೆ 607 - ಆಟಿ ಕಳೆಂಜ ಒಂದು ಅಧ್ಯಯನ

೨೪.ಮದಿಪು (ಆಟಿ ಸೋಣ - ನಿರ್ನಾಲ) (2004)

ಪ್ರಧಾನ ಸಂಪಾದಕರು - ವಾಮನ ನಂದಾವರ

ಪ್ರಸರಾಂಗ : ಕರ್ನಾಟಕ ತುಳು ಸಾಹಿತ್ಯ ಆಕಾಡೆಮಿ ಮಂಗಳೂರು 64 ಪುಟಗಳ ಪುಸ್ತಕದಲ್ಲಿ ಸಂಪ್ರದಾಯೊಡು ಆಟಿ ಆಟಿ ಕಳೆಂಜ ಶೀರ್ಷಿಕೆಯಡಿಯಲ್ಲಿ 64 ಪುಟಗಳ ಪುಸ್ತಕದಲ್ಲಿ ಆಟಿ ಕಳೆಂಜ ಹಾಗೂ ಕಳೆಂಜ ವೇಷಧಾರಿಗಳ ಶೋಷಿತ ಜನಾಂಗದ ಕುರಿತಾದ ಮಾಹಿತಿಯನ್ನು ವಾಮನ ನಂದಾವರವರು ನೀಡಿರುತ್ತಾರೆ.

೨೫. ತುಳು ಎಸಲ್ -3

ಕರ್ನಾಟಕ ಪಠ್ಯ ಪುಸ್ತಕ ಸಂಘ (ರಿ)

ಅಧ್ಯಕ್ಷರು - ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್

ಅಧ್ಯಕ್ಷರು, ಪಠ್ಯಪುಸ್ತಕ ರಚನಾ ಸಮಿತಿ ಹಾಗೂ ಕರ್ನಾಟಕ ತುಳು ಸಾಹಿತ್ಯ ಆಕಾಡೆಮಿ, ಮಂಗಳೂರು.

62 ಪುಟಗಳ ಪುಸ್ತಕದಲ್ಲಿ ಆಟಿಯ ಕುರಿತಾದ ಒಂದು ಪದ್ಯವನ್ನು ಡಾ. ಸುನೀತಾ ಎಂ ಶೆಟ್ಟಿಯವರು ಬರೆದಿರುತ್ತಾರೆ. ಆಟಿ ತಿಂಗಳ ಕುರಿತಾದ ಆಚರಣೆಯ ಬಗ್ಗೆ ಚೊಕ್ಕವಾಗಿ ಕವಯಿತ್ರಿ ಬರೆದಿರುತ್ತಾರೆ

ಪು.ಸಂ- 34 (ಆಟಿ)

೧೬. ಮದಿಪು (ಅಕ್ಟೋ 18 – ಜನವರಿ 18)

ಅಧ್ಯಕ್ಷರು – ಎಂ. ಜಾನಕಿ ಬ್ರಹ್ಮಾವರ

80 ಪುಟಗಳ ಪುಸ್ತಕದಲ್ಲಿ ಶ್ರೀಯುತ ಬಿ.ತಮ್ಮಯ್ಯ ಬಿ.ಸಿ.ರೋಡ್‌ರವರು 'ಆಟಿ' ಶೀರ್ಷಿಕೆಯಡಿಯಲ್ಲಿ ಆಟಿಯ ಕುರಿತಾದ ಆಚರಣೆ ಸೊಗಡಿನ ಕುರಿತು ಸಂಕ್ಷಿಪ್ತ ಮಾಹಿತಿಯಿಂದ ಸುಂದರವಾದ ಕವಿತೆಯನ್ನು ಬರೆದಿರುತ್ತಾರೆ.

ಪು.ಸಂ – 56

೧೭. ಮದಿಪು (2012)

ಅಧ್ಯಕ್ಷರು ಉಮಾನಾಥ್ ಕೋಟ್ಯಾನ್

64 ಪುಟಗಳ ಪುಸ್ತಕದಲ್ಲಿ ನಳಿನಿ ಜಿ.ರೈ ಯವರು 'ಆಟಿಡೊಂಜಿ ದಿನ' ಶೀರ್ಷಿಕೆಯಡಿಯಲ್ಲಿ ಆಟಿ ತಿಂಗಳ ಆಟಗಳ ಕುರಿತು ತಿಂಡಿ ತಿನಿಸುಗಳ ಕುರಿತು ಸಂಕ್ಷಿಪ್ತವಾಗಿ ಬರೆದಿರುತ್ತಾರೆ ಪು.ಸಂಖ್ಯೆ 17

೧೮. ಮದಿಪು (2011)

ಅಧ್ಯಕ್ಷರು – ಪಾ.ರಾಮಕೃಷ್ಣ ಆಚಾರ್

64 ಪುಟಗಳ ಪುಸ್ತಕದಲ್ಲಿ ಶ್ರೀಯುತ ಕೆ. ಮಹೇಂದ್ರನಾಥ ಸಾಲೆತ್ತೂರುರವರು "ಆಟಿ ಕುಲ್ಲೆರೆ..." ಶೀರ್ಷಿಕೆಯಡಿಯಲ್ಲಿ ಆಟಿ ತಿಂಗಳಗೆ ತನ್ನ ತವರಿಗೆ ಹೋದ ಹೆಂಡತಿಯನ್ನು ನೆನೆಸುತ್ತಾ ಇರುವ ಗಂಡನಾದವನ ಮನೋಭಾವವನ್ನು ಈ ಕವಿತೆಯಲ್ಲಿ ಬರೆಯಲಾಗಿದೆ. ಪು.ಸಂ 22

೧೯. ಮದಿಪು (2005)

64 ಪುಟಗಳ ಪುಸ್ತಕದಲ್ಲಿ

ಪ್ರಧಾನ ಸಂಪಾದಕರು :- ಶ್ರೀ.ಯಂ.ಕೆ. ಸೀತರಾಮ್ ಕುಲಾಲ್

64 ಪುಟಗಳ ಈ ಪುಸ್ತಕದಲ್ಲಿ ಶ್ರೀಯುತ ಚಂದ್ರಶೇಖರ್ ಬೋಳೂರುರವರು ಆಟಿ ತಿಂಗಳನಲ್ಲಿ ಬರುವ, ಮಳೆ ಹಾಗೂ ಆಗಿನ ಸುತ್ತಲಿನ ವಾತಾವರಣ ಹಾಗೂ ಆಟಿ ತಿಂಗಳ ತಿನಿಸುಗಳ ಕುರಿತಾದ ಮಾಹಿತಿಯನ್ನು ಕವಿತೆಯೊಂದರಲ್ಲಿ ನೀಡಿರುತ್ತಾರೆ.

೨೦. ಮದಿಪು (2002) (ಎಸ್.ಎಚ್.ಶಿವರುದ್ರಪ್ಪ)

64 ಪುಟಗಳ ಪುಸ್ತಕದಲ್ಲಿ ಯಂ.ಜಾನಕಿ ಬ್ರಹ್ಮಾವರ್‌ರು 'ಆಟಿಡ್ ಎಂಚಗೆ ..." ಎಂಬ ಲೇಖನವೊಂದನ್ನು ಬರೆದಿದ್ದಾರೆ. ಈ ಲೇಖನದಲ್ಲಿ ಆಟಿ ತಿಂಗಳನಲ್ಲಿ ಜನರಿಗಿರುವ ಕಷ್ಟಗಳ ಕುರಿತಾದ ಮಾಹಿತಿಯನ್ನು ನೀಡಿದ್ದಾರೆ. ಪ್ರಕೃತಿದತ್ತವಾಗಿ ಸಿಗುವ ಹಣ್ಣು ಹಂಪಲು ಬಗ್ಗೆಯು ಈ ಲೇಖನದಲ್ಲಿದೆ. ಪು.ಸಂಖ್ಯೆ 16

೨೧. ಮದಿಪು (2002)

64 ಪುಟಗಳ ಪುಸ್ತಕದಲ್ಲಿ ಎಸ್.ಎಚ್. ಶಿವರುದ್ರಪ್ಪ ಆಟಿಡೊಂಜಿ ಬರ್ಸ ಎಂಬ ಶೀರ್ಷಿಕೆಯಡಿಯಲ್ಲಿ ಉಷಾ ಎಂ. ರವರು. ಬರೆದ ಕಥೆಯಲ್ಲಿ ಅದೇ ತಿಂಗಳ ಕುರಿತಾದ ಮಾಹಿತಿಗಳಿವೆ. ಪು.ಸಂಖ್ಯೆ 22-24

೩.೨.ಮದಿಪು (1999) (ಬಾಲಕೃಷ್ಣ ಶೆಟ್ಟಿ ಪೊಳಲಿ)

64 ಪುಟಗಳ ಪುಸ್ತಕದಲ್ಲಿ "ಆಟಿಡೊಂಜಿ ಮೇಕೆದೋಲೆ" ಶೀರ್ಷಿಕೆಯಡಿಯಲ್ಲಿ ಆಟಿ ತಿಂಗಳಿನಲ್ಲಿ ತನ್ನ ತವರಿಗೆ ಹೋದ ಹೆಂಡತಿಗೆ ಪತ್ರ ಬರೆದಂತಹ ಗಂಡ ಆಕೆಯ ಪ್ರತ್ಯುತ್ತರದ ಪತ್ರ ಬಾರದೆ ಇದ್ದಾಗ ಚಡಪಡಿಸಿ ಆಟಿ ತಿಂಗಳ ಕಷ್ಟವನ್ನು ನಿವೇದಿಸುವಾ ಪರಿಯನ್ನು ಶ್ರೀಯುತ ಅಶೋಕ್ ಎನ್. ಕಡೇಶಿವಾಲಯದವರು ಬರೆದಿದ್ದರು. (ಪು.ಸಂಖ್ಯೆ 55)

ಈ ಮೇಲಿನ ಅಧ್ಯಯನದ ಹಿನ್ನೆಲೆಯನ್ನು ಗಮನಿಸಿದರೆ ಆಟಿ ತಿಂಗಳ ಕುರಿತಾದ ಸಮಗ್ರ ಅಧ್ಯಯನ ನಡೆದಿಲ್ಲ. ಸಂಗ್ರಹ ಹಾಗೂ ವಿವರಣಾತ್ಮಕ ವಿಶ್ಲೇಷಣೆಗೆ ಅಧ್ಯಯನವು ಸೀಮಿತವಾಗಿದೆ. ಈ ಬಗ್ಗೆ ಸಮಗ್ರ ಅಧ್ಯಯನಕ್ಕೆ ಪೀಠಿಕೆಯನ್ನು ಒದಗಿಸುವುದು ಅಧ್ಯಯನದ ಉದ್ದೇಶವಾಗಿದೆ.

# ಅಧ್ಯಾಯ 3

## ಆಟಿ ಕಳೆಂಜ ಕುಣಿತದ ವಿಶ್ಲೇಷಣೆ

'ಆಟಿ ಕಳೆಂಜ ಎಂಬುವುದು ತುಳುನಾಡಿನ ತೆಂಕಣಪೂರ್ವ ಪ್ರದೇಶದಲ್ಲಿ ದೈವ ನರ್ತಕರು ಕುಣಿಯುವ ಒಂದು ತೆರನಾದ ಜಾನಪದ ನೃತ್ಯ ತುಳುವರು ತಮ್ಮ ಕೃಷಿ ಪ್ರಧಾನ ಬದುಕಿನಲ್ಲಿ ಅನೇಕ ಜನಪದೀಯ ಆಚರಣೆಗಳನ್ನು ಮಾಡುವರು. ಹೀಗಾಗಿ 'ಆಟಿಕಳೆಂಜ'ವು ಕೂಡಾ ದೈವರಾಧನೆಯ ಪ್ರಕ್ರಿಯಗೆ ಒಳಪಡುವುದು ಎನ್ನಬಹುದು.

೧. **ಆಟಿಕಳೆಂಜದ ಅರ್ಥ :-**

ಹಲವು ವಿದ್ವಾಸರು 'ಆಟಿಕಳೆಂಜ' ಎಂಬ ಪದಕ್ಕೆ ಅರ್ಥವನ್ನು ನೀಡಲು ಪ್ರಯತ್ನಿಸಿದ್ದಾರೆ. ಆಟಿ ತಿಂಗಳಲ್ಲಿ ಬರುವ ಆಟಿ ಕಳೆಂಜದ ಅರ್ಥವನ್ನು ಈ ರೀತಿಯಾಗಿ ನಿರ್ವಹಿಸುತ್ತಾರೆ. 'ಕಳೆಂಜ' ಶಬ್ಧದ ಅರ್ಥ ಒಂದು ತುಳುವಿನಲ್ಲಿ 'ಕುಮರ' ಎಂದಾಗುತ್ತದೆ ಎನ್ನುವುದು ಒಂದು ವಿಚಾರವಾದರೆ ಕಳೆಂಜ ಪದದಲ್ಲಿರುವ 'ಅಂಜ' ಅಣ್ಣ ಎಂಬುವುದು ಅಣ್-ಜೀವ್ ಎಂಬುದರ ಸಂಕ್ಷಿಪ್ತ ರೂಪ ಎಂದು ಹೇಳಲಾಗುತ್ತದೆ. 'ಕಳ' ಎಂದರೆ ಭೂಮಿ ಪ್ರದೇಶ ಎಂಬ ಅರ್ಥವಿದೆ. ತುಳು ಮತ್ತು ಮಲಯಾಳ ಭಾಷೆಯಲ್ಲಿಯೂ ಇದೇ ಆರ್ಥದಲ್ಲಿ ಬಳಸಲಾಗುತ್ತದೆ. ಅಜೆ, ಅಂಚೆ, ಅಂಜ ಈ ಪದಗಳು ಕಾಡು-ಬೆಟ್ಟ ಎನ್ನುವ ಅರ್ಥದಲ್ಲಿ ಬಳಕೆಯಾದಂತೆ ಕಂಡು ಬರುತ್ತದೆ. "ಕಳಂಜ ಮಲೆ" ಬಂಟ್ವಾಳ ಇದಕ್ಕೊಂದು ಒಳ್ಳೆಯ ಉದಾಹರಣೆ. ಹೀಗಾಗಿ ಕಳೆಂಜ ಎನ್ನುವುದು ಬೆಟ್ಟ ಕಾಡಿನಿಂದ ಕೂಡಿದ ಪ್ರದೇಶ ಎಂದು ಅರ್ಥೈಸಬಹುದಾಗಿದೆ. ಕಳೆಂಜ ಎಂಬ ಈ ಶಕ್ತಿಗೆ ಯಾವುದೇ ಬಗೆಯ ಗುಡಿಗಳಾಗಲೀ ಸ್ಥಾನಗಳಾಗಲೀ ಕಟ್ಟೆಗಳಾಗಲೀ ಇಲ್ಲ ವರ್ಷಕ್ಕೆ ಒಂದು ಬಾರಿ ಮನೆಗೆ ಬಂದು ಹೋಗುವಂತಹ ಹದು ಇದಕ್ಕೆ ಮೂರ್ತಿಯೂ ಇಲ್ಲ ಎನ್ನುವುದನ್ನು ಅರವಿಂದ ಮಾಲಗತ್ತಿಯವರು ಸ್ಪಷ್ಟಪಡಿಸಿದ್ದಾರೆ. (ತುಳುವರ ಆಟಿ ಕಳೆಂಜ ಅಂತರ್‌ದೃಷ್ಟಿಯ ಸಂಶೋಧನೆ)

ಹಿಂದೂ ದೇವತೆಗಳ ಬಗ್ಗೆ ಚರ್ಚಿಸುವುದೆಂದರೆ ಮಳೆಗಾಲದಲ್ಲಿ ಹಳೆಯ ಗೋಡೆಗೆ ಕೆಸರು ಮೆತ್ತಿದಂತೆ ಅಥವಾ ಹಳೆಯ ಗೋಡೆಯನ್ನು ತೊಳೆದಂತೆ. ನಾವು ಯಾವುದೇ ಒಂದು ನಿರ್ಣಯಕ್ಕೆ ಬಂದು ನಿಂತರೂ, ಈ ನಿರ್ಣಯದ ಮೇಲೆ ಮತ್ತೊಂದು ನಿರ್ಣಯವನ್ನು ಕೊಡುವಂತೆ ಪ್ರಚೋದಿಸುತ್ತದೆ. ಈ ನಿರ್ಣಯಗಳು ಪರಸ್ಪರ ಪೂರಕವಾಗಿರಾಬಹುದು, ಇಲ್ಲವೆ ವಿರೋದಭಾಸದಿಂದ ಕೂಡಿರಬಹುದು ಅಥವಾ ಬೆಳವಣಿಗೆಯ ಇನ್ನೊಂದು ಘಟ್ಟವನ್ನೇ ಹೇಳುವಂತಾಗಿರಬಹುದು ಹೀಗೆ ವಿಭಿನ್ನ ನೆಲೆಯಲ್ಲಿ ತೆರೆದುಕೊಳ್ಳುವ ಗುಣ ಈ ಕ್ಷೇತ್ರಕ್ಕಿದೆ.

ತುಳುವರ ಆಟಿ ಕಳೆಂಜ ಮತ್ತು ಜೋಕುಮಾರನ ಕುರಿತು ಬರೆಯತ್ತ ಹಾಗೂ ಕರ್ನಾಟಕದ ದೇವತೆಗಳ ಬಗ್ಗೆ ಬರೆಯುತ್ತ ಒಟ್ಟು ಆರಾಧನ ಶಕ್ತಿಗಳನ್ನು ಐದು ವಿಧದಲ್ಲಿ ವರ್ಗೀಕರಿಸಿದ್ದಾರೆ. ಈಗ ಅದಕ್ಕಿಂತ ಭಿನ್ನವಾಗಿ

ನೋಡಲು ಸಾಧ್ಯವೆನಿಸುತ್ತದೆ. ಸ್ತ್ರೀ ಆರಾಧನಾ ಶಕ್ತಿಗಳು ಮತ್ತು ಪುರುಷ ಆರಾಧನ ಶಕ್ತಿಗಳು ಎಂದು ಸ್ಥೂಲವಾಗಿ ವರ್ಗೀಕರಿಸಬಹುದಾದರೂ, ಈ ಬಗೆಯ ವರ್ಗೀಕರಣದಿಂದ ಅಧ್ಯಯನಕ್ಕೆ ಹೆಚ್ಚಿನ ಅನುಕೂಲವಾಗಲಾರದು.



೨. **ಆಟಿಕಳೆಂಜದ ವೇಷ ಭೂಷಣ :-**

ಆಟಿ ತಿಂಗಳಲ್ಲಿ ದೈವ ನರ್ತಕರು ಊರೂರು ಸಂಚರಿಸಿ, ಮನೆಮನೆಗೆ ಆಟಿ ಕಳೆಂಜನ ಸಂದೇಶವನ್ನು ಸಾರುವರು. ಆಟಿ ತಿಂಗಳಲ್ಲಿ ಬರುವ ಕಳೆಂಜನಿಗೆ ಅದರದೇ ರೀತಿಯ ವೇಷಭೂಷಣಗಳಿವೆ. 'ಓರ್ವ ಗಂಡಿಗೆ ಕಣ್ಣಿಗೆ ಕಾಡಿಗೆ, ಮುಖಕ್ಕೆ ಕಪ್ಪು ಮತ್ತು ಕೆಂಪು ಗೆರೆಗಳನ್ನು ಬರೆದು ಮೀಸೆ ಸಮೇತ ಅಲಂಕಾರ ಮಾಡಿರುತ್ತಾರೆ. ತಲೆಯ ಭಾಗಕ್ಕೆ ತೆಂಗಿನ ಎಳೆತು ಸಿರಿಯಿಂದ ತಯಾರಿಸಿದ ವಿನ್ಯಾಸಭರಿತ ಕದಿರು ಮುಡಿ ಧರಿಸುವರು. ಚಲ್ಲನ ಮತ್ತು ಕೆಂಪು ಅಂಗಿ ಧರಿಸಿ, ಕಾಲಿಗೆ ಗಗ್ಗರ ಕಟ್ಟಿಕೊಳ್ಳುವರು. ಕಟಿ ಪ್ರದೇಶಕ್ಕೆ ಸಿರಿ ಕಟ್ಟಿಕೊಳ್ಳುವರು, ಕುತ್ತಿಗೆಯ ಭಾಗಕ್ಕೆ ನವಿರಾಗಿ ಕತ್ತರಿಸಿದ ಸಿರಿಯಿಂದ ಅಲಂಕರಿಸುವರು ಕೈಯಲ್ಲಿ ಒಂದು ಉದ್ದನೆಯ ಕೋಲು ಮತ್ತು ಓಲಿ ಗರಿಯ ಛತ್ರಿಯು ಆಟಿ ಕಳೆಂಜನಲ್ಲಿರುತ್ತದೆ. ಈ ರೀತಿಯ ಅಲಂಕೃತ ನರ್ತಕನ ಜೊತೆ ಒಬ್ಬನು ತೆಂಬರೆ ಬಡಿಯುತ್ತ ಆಟಿ ಕಳೆಂಜ ಎಂಬ ವ್ಯಕ್ತಿ (ಶಕ್ತಿ)ಯ ಹುಟ್ಟು ಮೂಲ ಮತ್ತು ಬೆಳವಣಿಗೆಯ ಕಥೆಯನ್ನು ಪಾರ್ದನ ರೂಪದಲ್ಲಿ ಹಾಡುವನು' (ಆಟಿ–ಸೋಣ ಬಿ.ಬಾಬು ಅಮೀನ್ 21–30)



ಈ ಮೇಲೆ ವಿವರಿಸಿರುವ ಆಟಿ ಕಳೆಂಜದ ವೇಷಭೂಷಣಕ್ಕೂ ಹಾಗೂ ಅಭಯ ಕೌಕ್ರಾಡಿಯವರು ಹೇಳಿರುವ ಮುಗೇರರ ಆಟಿ ಕಳೆಂಜ ವೇಷಭೂಷಣಕ್ಕೂ ಭಿನ್ನತೆ ಇದೆ. "ಕಲೆಂಜನ ಬಾಹ್ಯರೂಪ ಈ ರೀತಿ ಇದೆ. ಕೇಪುಲ ಗಿಡದ ಕೋಲಿನಿಂದ ಕಿರೀಟವನ್ನು ತಯಾರುಮಾಡುತ್ತಾರೆ. ಇಟ್ಟುಕೊಳ್ಳುತ್ತಾರೆ ಮುಖ ಮತ್ತು ಕೈಗಳಿಗೆ ಸೇಡಿ ಮಣ್ಣಿನ ಬಣ್ಣವನ್ನು ಅಲಂಕಾರವಾಗಿ ಬಳಿದುಕೊಳ್ಳುತ್ತಾರೆ. ಮೈ ಕೈಗಳಿಗೆ ಬಿಳಿ ಬಣ್ಣದ ಸೇಡಿಯನ್ನು ಬಳಿದು. ಕಿಬ್ಬೊಟ್ಟೆಯಿಂದ ಎದೆಯವರೆಗೂ ಕೆಂಪು ಬಣ್ಣದಲ್ಲಿ 'X' ರೀತಿಯ ಗೇಂಟಿಯನ್ನು ಎಳೆಯುತ್ತಾರೆ. ಎರಡು ತೋಳುಗಳಿಗೂ ಉದ್ದವಾಗಿ ಸಮನಾಂತರ ಗೆರೆಗಳನ್ನು ಬರೆದುಕೊಂಡು ಉಳಿದಂತೆ ಕೆಂಪು ಚುಕ್ಕಿಯನ್ನು ಇರಿಸಿಕೊಳ್ಳುತ್ತಾರೆ. ಸೊಂಟಕ್ಕೆ ತೆಂಗಿನಮರದ ಎಳೆಯ ಗರಿಗಳಿಂದ ತಯಾರಿಸಿದ 'ತಿರಿ'ಯನ್ನು ಸುತ್ತಿಕೊಳ್ಳುತ್ತಾರೆ. ಎಡಗೈಯಲ್ಲಿ ಎರಡು ಮೀಟರ್ ಉದ್ದದ ಬಿದಿರೆಣೆಗೆ ಸಿಲುಕಿದ 'ಬಲಿಚತ್ರೊ' ಮತ್ತು ಎಡಬಗಲದಲ್ಲಿ ಕಿಬ್ಬೊಟ್ಟೆಗೆ ಎಡಗೈಯಲ್ಲಿ ಚತ್ರಿ ಹಿಡಿದುಕೊಂಡ ಚರ್ಮವಾದ್ಯ 'ದುಡಿ' ಈ ದುಡಿಯನ್ನು ಬಡಿಯುತ್ತಾ ಆಟಿ ಕಳೆಂಜ ಹಿಂದೆ ಮುಂದೆ ಹೆಜ್ಜೆ ಹಾಕಿಕೊಂಡು ಕುಣಿಯುತ್ತಾನೆ ಮುಖಕ್ಕೆ ತೆಂಗಿನ ನಾರಿನಿಂದ ಮಾಡಿದ ಮೀಸೆ ಮತ್ತು ಗಡ್ಡವನ್ನು ಕಟ್ಟುತ್ತಾರೆ. (ಮುಗೇರರು 159).

**೩ ಆಟಿ ಕಳೆಂಜದ ಪ್ರದರ್ಶನದ ಸ್ವರೂಪ :-**

ಆಟಿ ಕಳೆಂಜನು ವೇಷಭೂಷಣವಾದ ಬಳಿಕ ತತ್ರ ಹಿಡಿದು ಊರು ಊರಿಗೆ ಪರ್ಯಟನೆ ಮಾಡಿ ಮನೆ ಮನೆಯಲ್ಲಿ ಕುಣಿದು ಮನರಂಜನೆಯನ್ನು ನೀಡುತ್ತಾ ಆಟಿ ತಿಂಗಳಲ್ಲಿ ಇದರಿಂದ ತುಸು ಉಪಯೋಗವಾಗುತ್ತದೆ. ದೈವ ನರ್ತಕನು ಈ ರೀತಿ ಆಟಿ ತಿಂಗಳಲ್ಲಿ ಕಳೆಂಜನಾಗಿ ಕುಣಿಯುವುದರಿಂದ ಈ ಸಂಪಾದನೆ ಆತನ ಬದುಕಿಗೆ ಆ ತಿಂಗಳಲ್ಲಿ ಸ್ವಲ್ಪ ಮಟ್ಟಿಗಿನ ಆಸರೆಯಾಗಿ ಪರಿಣಮಿಸುತ್ತದೆ ಎಂದು ಹೇಳಬಹುದು.

ಆಟಿ ಕಳೆಂಜನು ಬಂದಾಗ ಅವನಿಗೆ ಅರಿಶಿನದ ಪುಡಿ ಹಾಗೂ ಮಸಿಯನ್ನು ನೀಡುವುದುಂಟು ಕಳೆಂಜನು ಅದನ್ನು ಮಂತ್ರಿಸಿ ಸುತ್ತಿ ಎಸೆಯುವನು. ಆಟಿ ತಿಂಗಳಲ್ಲಿ ಬರುವ ಮಾರಿ ಪೀಡೆ ಇನ್ನಾವುದೇ ದೋಷಗಳಿದ್ದರೆ ಇದರಿಂದ ನಿವಾರಣೆಯಾಗುವುದು ಎಂಬ ನಂಬಿಕೆಯಿಂದ ದೋಷ ನಿವಾರಣೆಗಾಗಿ ಮಂತ್ರಿಸಿ ಕೊಡುವ ಉರ್ಕು ಅಥವಾ ತಾಯತ ಮಕ್ಕಳಿಗೆ ಕಟ್ಟುತ್ತಾರೆ. ದೈವ ನರ್ತಕರಿಗೆ ಅಕ್ಕಿ, ಭತ್ತ, ತರಕಾರಿ, ತೆಂಗಿನಕಾಯಿ ನಗದು ನೀಡುವರು. ಇವುಗಳನ್ನು ಗೆರಸೆಯಲ್ಲಿ ನೀಡುವರು. ಆಟಿಕಳೆಂಜನ್ನು ಗೆರಸೆಯನ್ನು ಹಿಂದಿರುಗಿಸುವಾಗ ಅದರಲ್ಲಿ ಕೊಂಚ ಉಳಿಸಿ ಕೊಡುತ್ತಾನೆ. ಮನೆಯವರು ಅದನ್ನು ಪ್ರಸಾದದಂತೆ ಸ್ವೀಕರಿಸಿ ಹಂಚಿ ತಿನ್ನುತ್ತಾರೆ. ಇದೇ ರೀತಿಯಲ್ಲಿ ಕುಣಿತವು ಊರಿನ ಮನೆ ಮನೆಗಳಿಗೂ ಸಾಗಿ ಮೂರರಿಂದ ಐದು ದಿನಗಳವರೆಗೆ ಮುಂದುವರಿದು ಪ್ರದರ್ಶನದ ಕೊನೆಯ ದಿನ ಸಂಜೆ 'ಬಿರಿಪುನ' ಕಾರ್ಯಕ್ರಮವಿರುತ್ತದೆ.

"ಆಷಾಡ ಮಾಸದಲ್ಲಿ ಅಂದರೆ ಮಳೆಗಾಲದಲ್ಲಿ ಸಾಮಾನ್ಯವಾಗಿ ಹಳ್ಳಿಯ ಜನರಿಗೆ ಉಣ್ಣಲು, ತಿನ್ನಲು ಬಹಳ ಕಷ್ಟದ ಕಾಲ ಆದ್ದರಿಂದಲೇ ಈ ಸಮಯದಲ್ಲಿ ಬಹಳ ಬಡತನದಲ್ಲಿರುವ ಹರಿಜನರಂತೂ ಕುಣಿತದ ಮೂಲ ಮಾರಿ ಕಳೆಯುವ ಅಥವಾ ಇತರೆ ನೆಪದಲ್ಲಿ ಮನೆ ಮನೆ ತಿರುಗಿ ಹಾಡಿ ಕುಣಿದು ಜೀವನೋಪಾಯಕ್ಕಾಗಿ ಬೇಕಾದ ವಸ್ತುಗಳನ್ನು ಸಂಗ್ರಹಿಸುತ್ತಾರೆ. ಅಂತಹವರಲ್ಲಿ ಆಟಿಕಳೆಂಜನು ಒಬ್ಬನಾಗಿರಬೇಕು. ಏಕೆಂದರೆ ಶ್ರಾವಣ ತಿಂಗಳು

ಬಂದಾಗ ಕಳೆಂಜ ಮರಳಿ ಹೋಗುತ್ತಾನೆ. ಈ ರೀತಿ ಹರಿಜನರ ಅನೇಕ ಕುಣಿತಗಳು ಮತ್ತು ಆ ಸಂದರ್ಭದ ಕುಣಿತದ ಹಾಡುಗಳು ಬದುಕಿನ ನಿರ್ವಹಣೆಯ ಅನಿವಾರ್ಯತೆಯಿಂದ ಹುಟ್ಟಿಕೊಂಡವುಗಳಾಗಿರುತ್ತದೆ". (ವಿವೇಕ ರೈ ಬಿ.ಎ. 1958) (ಎ:779) ಅಭಯ ಕುಮಾರ್ ಕೌಕ್ರಾಡಿಯವರು ಈ ಮೇಲಿನ ವಾದವನ್ನು ಖಂಡಿಸುತ್ತಾ ಇಬ್ಬರು ಮೂವರು ಮಾತ್ರ ಒಂದು ಗ್ರಾಮದಲ್ಲಿ ಕಳೆಂಜನ ವೇಷ ಧರಿಸುತ್ತಾರೆ. ಹೀಗಿರುವಾಗ ಎಲ್ಲರೂ ಧರಿಸಿದ್ದಲ್ಲಿ ಮಾತ್ರ ಎಲ್ಲರ ಬಡತನ ದೂರವಾಗಬಹುದು ಮೂರು – ಐದು ದಿನಗಳವರೆಗೆ ಮಾತ್ರ ಆಟಿ ಕಳೆಂಜ ಊರಲ್ಲಿ ಸಂಚರಿಸುತ್ತಾನೆ. ಸಂಚಾರಕ್ಕೆ ಹೋದಾಗ ದೊರೆತ ವಸ್ತುಗಳನ್ನು 'ಕಳೆಂಜ ಪೂಜೆ'ಯ ದಿನ ಅಡುಗೆ ಮಾಡಿ ಗ್ರಾಮದ ಅವರ ಮುಗೇರ ಜಾತಿಯವರಿಗೆ ಬಡಿಸುತ್ತಾರೆ. ಆದ್ದರಿಂದ ಕಳೆಂಜನ ಕುರಿತಾಗಿ ಆರಾಧನೆಯ ಹಿನ್ನೆಲೆಯಿರುವುದರಿಂದ ಡಾ। ವಿವೇಕ್ ರೈಗಳ ವಾದವನ್ನು ಅಭಯಕುಮಾರ್ ಕೌಕ್ರಾಡಿಯವರು ಒಪ್ಪಿಕೊಳ್ಳುವುದಿಲ್ಲವೆಂಬುವುದನ್ನು ಈ ಮೇಲೆ ನೀಡಿದ ವಿವರಣೆಯ ಅರ್ಥದಲ್ಲಿ ಅವರ 'ಮುಗೇರರು' ಗ್ರಂಥದಲ್ಲಿ ಉಲ್ಲೇಖವಾಗಿದೆ.

## ೪. <u>ಧಾರ್ಮಿಕ ಮತ್ತು ಸಾಮಾಜಿಕ ವ್ಯಕ್ತಿಯಾಗಿ ಕಳೆಂಜ :-</u>

ಕಳೆಂಜನ ತಂದೆ ತಾಯಿಗಳ ಬಗ್ಗೆ ಕೆಲ ನಿವೇದಕರು ಸೂಚಿಸುವಂತೆ ಐದ್ರುಮ್ ಮತ್ತು ಫಾತಿಮಾ 1) ಇನ್ನು ಕೆಲವರು ಈತ ಬಂಗಾಡಿ ಬಂಗರಸನ ಮಗನೆಂದೂ, ತಾಯಿ ಕೊಡಗಿನ ಕಾವೇರಮ್ಮ ಎಂದು ಹೇಳಲಾಗುತ್ತದೆ. 2) ಪಾಡ್ದನಗಳಲ್ಲಿ ಬ್ರಹ್ಮದೇವ ತಂದೆಯಾದರೆ ಬಳಕೇಂಡೆ ತಾಯಿಯಾಗಿ ಬರುತ್ತಾಳೆ.

ಈ ಮೂರು ಜನ ದಂಪತಿಗಳಲ್ಲಿ ಕಳೆಂಜ ಯಾರ ಮಗ ಎನ್ನುವುದು ಮುಖ್ಯವಲ್ಲ. ಮುಖ್ಯವಾದುದು ಕಳೆಂಜ ಬೇರೆ ಬೇರೆ ತಂದೆತಾಯಿಗಳ ಹೆಸರಿನ ಹಿನ್ನೆಲೆಯಲ್ಲಿ ಏಕೆ ಕಾಣಿಸಿಕೊಳ್ಳುತ್ತಾನೆ ಎನ್ನುವುದು. ಏಕೆಂದರೆ ಕೆಲವೊಮ್ಮೆ ಕಳೆಂಜ ಮಾಯೆಯ ಮಗನೆಂದು ಕರೆಯಿಸಿಕೊಳ್ಳುತ್ತಾನೆ. ಇನ್ನು ಕೆಲ ಗದ್ಯ ಕತೆಗಳಲ್ಲಿ ಈತ ನಾಗಬ್ರಹ್ಮ ಹಾಗೂ ಪರಮೇಶ್ವರ (ಈಶ್ವರ)ನ ಮಾನಸಪುತ್ರನೆಂದು ಹೇಳಲಾಗಿದೆ. ಬ್ರಹ್ಮದೇವ ನಾಗಬ್ರಹ್ಮ ಹಾಗೂ ಈಶ್ವರನಿಗೆ ಸಂಬಂಧಿಸಿದ ವಿಚಾರಗಳು ಹಿಂದೆಯೇ ಕಳೆಂಜನ ಪೌರಣಿಕ ವಿಚಾರಗಳಲ್ಲಿ ಚರ್ಚಿಸಲಾಗಿದೆ. ಹೀಗಾಗಿ ಇಲ್ಲಿ ಐದ್ರುಮ ಮತ್ತು ಫಾತಿಮ ಬಂಗರಸ ಮತ್ತು ಕಾವೇರಮ್ಮ ಇವರ ಹಿನ್ನೆಲೆಯಲ್ಲಿ ಗಮನಿಸಬಹುದು.

ಐದ್ರುಮ ಮತ್ತು ಫಾತಿಮಾ ಅವರ ಬಗ್ಗೆ ಹೆಚ್ಚಿನ ವಿವರಗಳು ಸಿಗುವುದಿಲ್ಲ. ನಿವೇದಕರು ಕಳೆಂಜನಿಗೆ ಗಡ್ಡ ಇರುವುದರೆಡೆಗೆ ಗಮನ ಸೆಳೆದು ಈತ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದವ ಎಂದು ಹೇಳಲಾಗುತ್ತದೆ. ಈತ 'ಸಲಾಮ್' ಮಾಡುವ ರೀತಿಯೂ ಇಸ್ಲಾಂ ಸಂಪ್ರದಾಯಕ್ಕೆ ಬದ್ಧವಾಗಿದೆ.



ಭೂತರಾಧನೆಯಲ್ಲಿ ಇಸ್ಲಾಂ ಭೂತಗಳು (ಆಲಿಭೂತ) ಕಾಣಿಸಿಕೊಳ್ಳುತ್ತವೆ. 1) ಅಲ್ಲದೆ ಬೊಬ್ಬರ್ಯ ಪಾಡ್ದನದಲ್ಲಿ ಫಾತಿಮಾನ ಬಗ್ಗೆ ವಿವರಗಳು ದೊರೆಯುತ್ತವೆ. 2) ಫಾತಿಮಾ ಬ್ಯಾರಿ ಮತ್ತು ಮುರವ ಬ್ಯಾರ್ರಿ ಇವರಿಗೆ ಏಳು ಜನ ಮಕ್ಕಳಿದ್ದರೂ ಇದರಲ್ಲಿ ಕಳೆಂಜನ ಸುಳಿವು ಇಲ್ಲ. ಕಳೆಂಜನ ಪಾಡ್ದನದಲ್ಲಿ ಕಳೆಂಜ ಮತ್ತು ಭೂತಗಳಿಗೆ ನಡೆದ ಯುದ್ಧದಲ್ಲಿ 'ಆಲಿಗೆ ಸೋಲಾಯಿತು' ಎಂದು ಬರುವುದಿದೆ. ಆರಾಧನೆಯಲ್ಲಿ ನಡೆದಿರುವ ಸ್ಪರ್ಧೆಗೆ ಅನುಗುಣವಾಗಿ ಇದು ಬಂದಿರಬಹುದಾದರೂ ಇದೇ ಮಹತ್ವದ ಗುಣವಾಗಿ ವ್ಯಕ್ತವಾಗಿಲ್ಲ.

❖ <u>ಚಾರಿತ್ರಿಕ ವ್ಯಕ್ತಿಯಾಗಿ ಕಳೆಂಜ</u> :-

ಕಳೆಂಜನೊಂದಿಗೆ ಪೌರಾಣಿಕ, ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳು ಸೇರ್ಪಡೆಯಾದಂತೆ, ಚಾರಿತ್ರಿಕ ವಿಚಾರಗಳು ಸೇರಿಕೊಂಡಿವೆ. ಹೀಗಾಗಿ ಆತನ ಬೆಳವಣಿಗೆಯ ಘಟ್ಟದಲ್ಲಿ ಇದು ಒಂದು ಮಹತ್ವದ ಹಂತವಾಗುತ್ತದೆ.

ಈ ಹಿಂದೆ ಈತ ಕೊಡಗಿನ ಕಾವೇರಿ ಮತ್ತು ಬಂಗಡಿ ಬಂಗರಸನ ಮಗನೆಂಬುದು ಗಮನಿಸಿದ್ದೇವೆ. ಇದಲ್ಲದೆ ಕಳೆಂಜನ ಪಾಡ್ದನಗಳಲ್ಲಿ ಈತ 'ಅರಸ' ಎನ್ನುವ ವಿಚಾರ ಸಾಕಷ್ಟು ಕಡೆಗಳಲ್ಲಿ ಬರುತ್ತದೆ. ದಕ್ಷಿಣದ ನಿಲೇಶ್ವರ ಘಟ್ಟದಿದ ಸಮುದ್ರದ ಬದಿಯವರೆಗೆ ಈತ ಅಧಿಕರವನ್ನು ಸ್ಥಾಪಿಸಿದ್ದ ಎನ್ನುವ ಪಾಳ್ಯಕ್ಕೆ ಹೋಗಿ ಗುರಾಣಿ ಎಸೆದು ಪಾಂಡಿಯರನ್ನು ಓಡಿಸಿದ ಎನ್ನುವ ಹಾಗೂ ದಕ್ಷಿಣದಲ್ಲಿ ಕೂಟ, ಉತ್ತರದಲ್ಲಿ ರಾಜ್ಯ ಮಾಡಿಕೊಂಡ ವಿವರಗಳು ಪಾಡ್ದನದಲ್ಲಿ ಬರುತ್ತವೆ. ಆನೆ, ಹುಲಿಗಳನ್ನು ಒಲಿಸಿಕೊಂಡವನಾಗಿ, ಸಾಹಸಿಗನಾಗಿ, ಸಾಧಕನಾಗಿ ರೂಪ ಪಡೆದಿದ್ದಾನೆ. ತುಂಬಿದ ಕೆನ್ನೆಯ ಸುಂದರಾಂಗನಾಗಿ, ಕೆಂಚು ಮೀಸೆ, ಕೇಸರಿ ಗಡ್ಡ ಬೆಳೆಸಿದವನಾಗಿದ್ದಾನೆ. ಏನು ತಿಂದರೂ (ಬಂದರೂ) ಕರಗಿಸಿಕೊಳ್ಳಬಲ್ಲ ದುಂಡನೆಯ ಡೊಳ್ಳು ಹೊಟ್ಟೆಯ ರಾಜನಾಗಿ ಬೆಳೆದಿದ್ದಾನೆ. ಈತನ ಕೈಯಲ್ಲಿರುವ ಕೊಡೆ (ತತ್ರ), ಚವಳ ಇವು ಚಾರಿತ್ರಿಕದಿಂದ ಧಾರ್ಮಿಕ ಅರ್ಥಕ್ಕೆ ಮುಖಮಾಡಿದೆ.

ಸಾಮ್ರಾಜ್ಯಶಾಹಿ ವ್ಯವಸ್ಥೆ ಹಾಗೂ ಪಾಳೆಗರಿಕೆ ಭೂತರಾಧನೆಯನ್ನು ವ್ಯವಸ್ಥಿತವಾಗಿ ರಾಜಕೀಯ ಆಡಳಿತಕ್ಕೆ ಬಳಸಿಕೊಂಡ ವಿಚಾರಗಳು ಈಗಾಗಲೇ ಅಧ್ಯಯನದಿಂದ ಹೊರಬಂದಿವೆ. ಕಳೆಂಜ ಭೂತವಲ್ಲದಿದ್ದರೂ ಭೂತರಾಧನೆಯಿಂದ ಸಂಪೂರ್ಣವಾಗಿ ಬಿಡಿಸಿಕೊಂಡು ಹೊರಬಂದಿಲ್ಲ. ಕಾರಣ ವೇಷ ಕಟ್ಟುವವರು ನಾಡಿನಲ್ಲಿ ಗಮನ ಸೆಳೆಯುವಂತಹದು. ರಾಜಕೀಯ ವ್ಯವಸ್ಥೆಯಲ್ಲಿ ಭೂತಾರಾಧನೆಯನ್ನು ಬಳಸಿಕೊಂಡಾಗ ಒಂದು ಕಾಲಕ್ಕೆ ಹೆಚ್ಚಿನ ಪ್ರಭುತ್ವ ಹೊಂದಿದ್ದ ಈ ವೇಷ ಕಟ್ಟುವ ಜನಾಂಗ ಪ್ರಭುತ್ವವನ್ನು ಕಳೆದುಕೊಂಡು ತಾವು ಕೈಗೊಂಬೆಯಾದಾಗ ಈ ಭೂತಾರಾಧನೆ ವ್ಯವಸ್ಥೆಯನ್ನು ನಿಂದಿಸಿ ಇದಕ್ಕೆ ಪರ್ಯಾಯವಾಗಿ ಕಳೆಂಜನನ್ನು ತಂದಿದ್ದಾರೆ. 1) ಹೀಗಾಗಿ ಕಳೆಂಜ ಭೂತಗಳ ಜೊತೆಗೆ ಯುದ್ಧಕ್ಕೆ ನಿಲ್ಲುತ್ತಾನೆ. ಈ ಪ್ರಸಂಗ ಗದ್ಯಕತೆಗಳಲ್ಲಿ ಪಾಡ್ದನಗಳಲ್ಲಿ ಬರುತ್ತದೆ. ಭೂತಾರಾಧನೆಯೊಂದಿಗೆ ಸಂಘರ್ಷ ನಡೆಸಿ ಸಾಂಪ್ರಾದಾಯಿಕ ಗೆಲುವನ್ನು ಸಾಧಿಸಿದ ಈತ ಪಾಡ್ದನಗಳಲ್ಲಿ ಅರಸನಾಗಿ ಬೆಳೆಯಲು ಅನುವು ಮಾಡಿಕೊಟ್ಟಿದೆ.

೬. **ಆಟಿ ಕಳೆಂಜ ಪ್ರದರ್ಶನದ ವೈಶಿಷ್ಟ್ಯತೆ :-**

ಆಟಿಕಳೆಂಜ ಹುಟ್ಟಿದ್ದು ಆಟಿ ಮಾಸದಲ್ಲಿ ಈತ ಬಾಲಕನೂ ಅಲ್ಲ, ಮುದುಕನೂ ಅಲ್ಲ, ಗಂಡು ಅಲ್ಲ, ಹೆಣ್ಣು ಅಲ್ಲ, ದೈವ ದೇವರುಗಳು ಇಲ್ಲದಿರುವ ಕಾಲದಲ್ಲಿ ಹುಟ್ಟಿಕೊಂಡಿದ್ದರಿಂದ ಈತನ ಕಜ್ಜವೂ ತೀರ ಸರಳವಾದುದು ಮತ್ತು ವಿಶೇಷತೆವಾದುದು ಊರಲ್ಲಿ ಹುಟ್ಟಿಕೊಳ್ಳುವ ಬೇರೆ ಸಂಕಟಗಳನ್ನು ದೂರ ಮಾಡಿ ನಂಬಿ ಬರುವವರನ್ನು ಹರಸಿ ಒಂದು ತಿಂಗಳಲ್ಲಿ ಕಾರಣಿಕವನ್ನು ಮೆರೆಸಿಕೊಂಡು ಉಳಿದ ದೇವತೆಗಳಿಗಿಂತ ಮಿಗಿಲೆನಿಸಿಕೊಳ್ಳುವವನು ಭಕ್ತರು ಕೊಟ್ಟಿದ್ದನ್ನೇ ಸ್ವೀಕರಿಸುವವನು.

ಆಟಿ ಕಳೆಂಜನ ಪ್ರದರ್ಶನ ವೈಶಿಷ್ಟ್ಯತೆಯನ್ನು ಇನ್ನಷ್ಟು ವಿವರಿಸುವುದಾದರೆ ವೇಷಧಾರಣೆ ಆದ ನಂತರದಲ್ಲಿ ಕಳೆಂಜ ಮೊದಲು ಕಾಪಡ (ಮುಗೇರ ನಾಯಕ)ನ ಮನೆಯಲ್ಲಿ ಪ್ರಥಮವಾಗಿ ಪ್ರದರ್ಶನ ನೀಡಿ ಕುಣಿಯುತ್ತಾನೆ. ನಂತರ ಊರಿನ ಇತರ ಮನೆಗಳಿಗೆ ಹೋಗಿ ಕುಣಿಯುತ್ತಾನೆ. ಹೀಗೆ ಕುಣಿಯುವ ಆಟಿ ಕಳೆಂಜನು ಲೌಕಿಕವಲ್ಲದ ಪ್ರತಿರೂಪವಾಗಿ ಆಟಿ ತಿಂಗಳಿನ ಅನಿಷ್ಟವನ್ನು ಕಳೆಯುವವನಾಗಿ ಬರುವನು ಎಂಬ ನಂಬಿಕೆ ತುಳುವರಲ್ಲಿದೆ. ಹೀಗೆ ಕಳೆಂಜ ಕುಣಿಯಲು ಹೋಗುವ ಪಾತ್ರಧಾರಿಗಳೊಡನೆ ಹಿಂದಿಬ್ಬರು ಹೋಗುತ್ತಾರೆ. ಕಳೆಂಜ ಒಂದು ಮನೆಯಲಿ ಕುಣಿಯುವುದಕ್ಕೂ ಮುನ್ನ ಆತನ ಜೊತೆಗೆ ಸಹಾಯಕ್ಕೆ ಬಂದವರು ಮನೆಯ ಯಜಮಾನನಲ್ಲಿ ಕಳೆಂಜ ಕುಣಿಯಲು ಒಪ್ಪಿಗೆಯನ್ನು ಕೇಳುತ್ತಾರೆ. ಯಾವುದೇ ಸೂತಕ ಅಡ್ಡಿ ಆತಂಕಗಳಿಲ್ಲದಿದ್ದರೆ ಆ ಮನೆಯ ಯಜಮಾನ ಒಪ್ಪಿಗೆಯನ್ನು ನೀಡುತ್ತಾನೆ. ಹೀಗೆ ಕಳೆಂಜ ಮನೆಗೆ ಬರುವುದಕ್ಕೂ ಮುನ್ನ ದೂರದಿಂದಲೇ ನಿಂತು ಜೋರಾಗಿ ಆಟಿ ಕಳೆಂಜನ ಜೊತೆಗಿರುವವರು 'ಆಟಿ ಕಳೆಂಜ ಬರೊಂದುಲ್ಲೆ' (ಆಟಿ ಕಳೆಂಜ ಬರುತ್ತಿದ್ದಾನೆ) ಎಂದು ಕೂಗಿ ಹೇಳುವುದರ ಹಿಂದಿರುವ ವಿಷಯ ವೈಶಿಷ್ಟ್ಯವನ್ನು ತುಳು ಸಾಹಿತ್ಯ ಅಕಾಡೆಮಿಯ ಈಗಿನ ರಿಜಿಸ್ಟ್ರಾರ್‌ರಂತಹ ಶ್ರೀಯುತ ಚಂದ್ರಹಾಸ್ ರೈಯವರು ಕ್ಷೇತ್ರ ಕಾರ್ಯದ ಸಂದರ್ಬದಲ್ಲಿ ಈ ರೀತಿಯಾಗಿ ಹೇಳಿದ್ದಾರೆ. ಬೆನ್ನಿ ಹಾಗೂ ಇನ್ನಿತರ ಕೃಷಿಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡ ಹಿಂದಿನ ಕೂಡು ಕುಟುಂಬ ವ್ಯವಸ್ಥೆಯ ಜನರು ಒಂದು ಮನೆಯಲ್ಲಿರುವಾಗ ಎಲ್ಲೋ ಒಂದೆಡೆ ಮನೆಯ ಸುತ್ತಮುತ್ತ ಆಡುತ್ತಿರುವ ಮಕ್ಕಳು ಬೆನ್ನಿ ಹಾಗೂ ಇನ್ನಿತರ ಮನೆಯ ಚಟುವಟಿಕೆಗಳಲ್ಲಿ ತಲ್ಲೀನರಾಗಿರುವ ಮಹಿಳೆಯರು, ಮನೆಯ ತೋಟದಲ್ಲಿ ಕೃಷಿ ಭೂಮಿಯಲ್ಲಿರುವ ಹಿರಿಯರು ಹಾಗೂ ಇನ್ನಿತರ ಮನೆಯ ಸದಸ್ಯರೆಲ್ಲರೂ ಮನೆಯ ಅಂಗಳದಲ್ಲಿ ಒಟ್ಟಾಗಿ ಸೇರಿ 3-4 ನಿಮಿಷ ಕುಣಿಯುವ ಆಟಿ ಕಳೆಂಜನ ಪ್ರದರ್ಶನದ ಶೈಲಿಯನ್ನು ನೋಡುವ ಭಾಗ್ಯ ಎಲ್ಲರಿಗೂ ದೊರೆತು ಆಟಿ ತಿಂಗಳಲ್ಲಿ ಬರುವ ಭಾದೆ ಅನಿಷ್ಟವು ಯಾರಿಗೂ ಸೋಂಕದಿರಲಿ ಎನ್ನುವ ನಿಟ್ಟಿನಲಿ ಈ ರೀತಿಯಾಗಿ ಜೋರಾಗಿ ಕೂಗಿ ಹೇಳುವುದರ ವೈಚಾರಿಕ ಕಾರಣವಿರಬೇಕು ಎಂದು ಹೇಳಿದ್ದಾರೆ.

ಆಟಿ ಕಳೆಂಜ ಆಟಿ ತಿಂಗಳಿಗೆ ಮನೆ ಮನೆ ಪರ್ಯಟನೆ ಮಾಡುವುದರಲ್ಲಿರುವ ನಂಬಿಕೆಯೆಂದರೆ ಅನಿಷ್ಟಗಳ ನಿವಾರಣೆ ಈ ತಿಂಗಳಲ್ಲಿ ಉಂಟಾಗುಬಹುದಾದ ದುಷ್ಟ ದುರಿತವನ್ನು ಆತ ದೂರ ಮಾಡುವ ಯುಗ ಪುರುಷನ ರೀತಿಯಲ್ಲಿ ಬಿಂಬಿಸಲ್ಪಡುತ್ತಾನೆ. ಈ ತಿಂಗಳಲ್ಲಿ ಉಂಟಾಗುವ ಭಯದ ನಿವಾರಣೆಗೆ ಆಟಿ ಕಳೆಂಜನನ್ನು

ಬರಮಾಡಿಸುತ್ತಿದ್ದರು. ಈ ತಿಂಗಳಲ್ಲಿ ಬರುವ ಈತನು ತನ್ನ ಭೀಕರ ರೂಪದಲ್ಲಿ ಆರ್ಭಟಿಸುತ್ತಾ ಕುಣಿದರೆ ಆ ಕುಣಿತಕೆ ಮನದೊಳಗಿನ ಭಯವೆಲ್ಲವೂ ಮಾಯವಾಗುವುದು.

ಕಳೆಂಜನ ಕುರಿತಾದ ಒಂದು ಕಥೆಯನ್ನು ಜನಪದ ಪುರಾಣದಿಂದ ತಿಳಿದುಕೊಳ್ಳಬಹುದಾಗಿದೆ. ಕಳೆಂಜನನ್ನು ಬಿರ್ಮರು ಸೃಷ್ಟಿ ಮಾಡುತ್ತಾರೆ. ಆದಎ ದೇವರ ಸೃಷ್ಟಿಯಾದ ಭೂತಗಣಗಳು ಕಳೆಂಜನನ್ನು ವಿಚಾರಿಸುತ್ತವೆ. ಭೂಲೋಕದಲ್ಲಿನ ಕಾರ್ಯ ಚಟುವಟಿಕೆಗಳನ್ನು ನೋಡಿ ದೇವರಿಗೆ ವರದಿ ಒಪ್ಪಿಸುವ ನಿಮಿತ್ತ ತಾನು ಬಂದಿರುವುದಾಗಿ ಕಳೆಂಜ ಹೇಳುತ್ತಾನೆ. ಆಗ ಆ ಭೂತಗಣಗಳು ಕಳೆಂಜನನ್ನು ವಿಚಾರಿಸುತ್ತವೆ. ಭೂಲೋಕದಲ್ಲಿನ ಕಾರ್ಯ ಚಟುವಟಿಕೆಗಳನ್ನು ನೋಡಿ ದೇವರಿಗೆ ವರದಿ ಒಪ್ಪಿಸುವ ನಿಮಿತ್ತ ತಾನು ಬಂದಿರುವುದಾಗಿ ಕಳೆಂಜ ಹೇಳುತ್ತಾನೆ. ಆಗ ಆ ಭೂತಗಣಗಳು ಸಿಟ್ಟಿಗೆದ್ದು ತಮ್ಮ ಬಗ್ಗೆ ವರದಿ ಒಪ್ಪಿಸುವ ಕೆಲಸ ಮಾಡಲು 'ನೀನು ಯಾರು?' ಪ್ರಶ್ನಿಸಿದಾಗ ಈ ಅಷಾಢ ತಿಂಗಳ ಕೆಸರಿನಲ್ಲಿ ನೀವು ಯಾಕೆ ಬಂದಿರಿ? ನಿಮಗೆ ಅಷ್ಟು ಪೌರುಷವಿದ್ದರೆ ಮನುಷ್ಯರು ಹೇಳಿದ ಹರಕೆಯನ್ನು ಕುಳಿತಲ್ಲಿಗೆ ತರಿಸಲು ನಿಮಗೆ ಏಕೆ ಆಗುವುದಿಲ್ಲ ಎಂದು ಪ್ರಶ್ನಿಸುತ್ತಾನೆ. ಆಗ ಭೂತಗಣಗಳು ನಮ್ಮಿಂದ ಅದೂ ಸಾಧ್ಯವಿದೆ. ನಮ್ಮನ್ನು ನಂಬದಿದ್ದಾಗ ಜನರಿಗೆ ರೋಗ ರುಜಿನಗಳನ್ನು ತಂದು ಹಾಕುತ್ತೇವೆ ಎಂದು ಹೇಳಿದಾಗ ನೀವು ತಂದು ಹಾಕಿದ ರೋಗ ರುಜಿನಗಳನ್ನು ನಾನು ಗುಣಪಡಿಸುತ್ತೇನೆ ಎಂದಾಗ ಅವರ ಮಧ್ಯೆ ಜಗಳವಾಗುತ್ತದೆ. ಕಳೆಂಜ ತನ್ನಲ್ಲಿ ಮಸಿಯ ನೀರು, ಅರಶಿನ ನೀರು, ಮೆಣಸು, ಉಪ್ಪು ಹುಳಿ ಇದೆಲ್ಲವುಗಳ ನೀರನ್ನು ಇಟ್ಟುಕೊಂಡದ್ದನ್ನು ಜಗಳವಾದಾಗ ಭೂತಗಳ ಮುಸುಡಿಗೆ ಈ ನೀರನ್ನು ಎರಚುತ್ತಾನೆ. ಭೂತಗಳಿಗೆ ಕಣ್ಣು ಉರಿಯಾಯಿತು ಅವುಗಳನ್ನು ಅಟ್ಟಿಕೊಂಡು ಅವುಗಳ ಗುಡಿ ಗುಂಡಾಂತರಗಳಲ್ಲಿ ಕೂಡಿ ಹಾಕಿ, ಬಾಗಿಲು ಹಾಕಿ ಆ ಬಾಗಿಲಿಗೆ ಒಂದು ಪೆಟ್ಟು ಒದ್ದು ಹೊರಬರದಂತೆ ಎಚ್ಚರಿಸಿ ಆಟಿ ತಿಂಗಳ ಸಂಚಾರ ತನಗೆ ಎಂದು ಹೇಳಿ ಬರುತ್ತಾನೆ. ಹಾಗಾಗಿ ಆಷಾಢದ ಒಂದು ತಿಂಗಳ ಸಂಚಾರ ಆಟಿ ಕಳೆಂಜನಿಗೆ ಎಂದು ಕಳೆಂಜ ಮಾಡಿದ ಕಟ್ಟುಕಟ್ಟಳೆ.

ಆಟಿ ತಿಂಗಳಲ್ಲಿ ಗುಡಿಗಳಿಗೆ ಬಾಗಿಲು ಹಾಕುವ ಹಿನ್ನೆಲೆಯಲ್ಲಿ ಮೇಲೋಕ್ತವಾದ ಅಟಿ ಕಳೆಂಜನ ಸುತ್ತ ಹೆಣೆದ ಐತಿಹ್ಯದ ಹಿಂದೆ ವಾಸ್ತವಿಕ ಹಾಗೂ ವೈಚಾರಿಕವಾದ ಸತ್ಯಗಳ ಒಗಟಡಗಿದೆ. ಆಟಿ ತಿಂಗಳಲ್ಲಿ ಮಹತ್ವದ ಭೂತಾರಾಧನೆಗಳು ಹಾಗೂ ಇನ್ನಿತರ ಹಬ್ಬ ಆಚರಣೆಗಳು ನಡೆಯದೆ ಇರಲು ಅತೀ ಮುಖ್ಯ ಕಾರಣವೆಂದರೆ ಆರ್ಥಿಕ ಮುಗ್ಗಟ್ಟು ಭೂತರಾಧನೆ ಹಾಗೂ ಇನ್ನಿತರ ಆಚರಣಾ ಚಟುವಟಿಕೆಗಳು ವೆಚ್ಚದಾಯಕವಾಗಿರುತ್ತದೆ. ಆಟಿ ತಿಂಗಳಲ್ಲಿನ ವಿಪರೀತ ಮಳೆಯ ಕಾರಣ ಬಯಲಿನಲ್ಲಿ ಚಪ್ಪರ ಹಾಕುವ ಹಾಗೂ ಜನರನ್ನು ಸೇರಿರುವ ಕಾರ್ಯ ತುಸು ಕಷ್ಟದಾಯಕವಾದದ್ದು. ಹಾಗಾಗಿ ಈ ತಿಂಗಳಲ್ಲಿ ದೇವತಾ ಕಾರ್ಯಗಳು ನಡೆಯುವುದಿಲ್ಲ. ಅದೇ ರೀತಿ ಇದೇ ಹಿನ್ನೆಲೆಯಲ್ಲಿ ಮದುವೆ ಹಾಗೂ ಮತ್ತಿನ್ಯಾವುದೇ ಶುಭ ಸಮಾರಂಭಗಳು ಆಟಿ ತಿಂಗಳಿನಲ್ಲಿ ನಡೆಯುವುದಿಲ್ಲ.

ಆಟಿ ಕಳೆಂಜದ ವಿಶೇಷತೆಯೆಂದರೆ, ಆಟಿ ತಿಂಗಳು ತುಳುವರಿಗೆ ಕಷ್ಟದ ಕಾಲವಾದ್ದರಿಂದ ತುಳುವಿನಲ್ಲಿ ಮಾನಸಿಕ ಸಾಮಾಜಿಕ, ಆರ್ಥಿಕ ಅಸಮತೋಲನ ಉಂಟಾಗುತ್ತದೆ. ಮಳೆ – ಬಿಸಿಲು ಇರುವುದರಿಂದ ಅಸಮತೋಲನ ಉಂಟಾಗುತ್ತದೆ. ಮಳೆ ಬಿಸಿಲು ಇರುವುದರಿಂದ ರೋಗ ರುಜಿನಗಳು ಕಾಡುತ್ತವೆ. ಮನುಷ್ಯರನ್ನು ರಕ್ಷಣೆ ಮಾಡಲೇಬೇಕಾದ ಭೂತಗಳು ಈ ತಿಂಗಳಿನಲ್ಲಿ ಗುಡಿಯನ್ನು ಸೇರಿಕೊಂಡಿರುತ್ತವೆ. ಅವುಗಳು

ಹೊರಬರುವಂತಿಲ್ಲ. ಇಂತಹ ಕಾಲದಲ್ಲಿ ಮನುಷ್ಯನಿಗೆ ನೆಮ್ಮದಿ ಸಮಾಧಾನ ಹೇಳಲು ಒಂದು ಅಲೌಕಿಕ ಶಕ್ತಿಯ ಅಗತ್ಯವಿರುತ್ತದೆ. ಜನಪದ ಪ್ರಮಾಣದಲ್ಲಿ ಕಳೆಂಜ ತನ್ನಲ್ಲಿರುವ ಕುರ್ದಿ ನೀರನ್ನು ರೋಗ ಪೀಡಿತವಾದ ದನ ಕರುಗಳಿಗೆ ಚಿಮುಕಿಸಿದರೆ ಅವುಗಳ ರೋಗ ನಿವಾರಣೆಯಾಗಿ ಆ ನೀರು ರೋಗಕ್ಕೆ ರಾಮಬಾಣದಂತೆ ಪರಿಣಮಿಸುತ್ತದೆ ಎಂಬುವುದು ಉಲ್ಲೇಖವಾಗಿದೆ. ಆಟಿ ಕಳೆಂಜನು ತನ್ನ ಕುಣಿತದ ಬಳಿಕ ನೀಡುವ ಪ್ರಸಾದವನ್ನು ಸೇವಿಸಿದರೆ ಮನುಷ್ಯರ ಮನದಲ್ಲಿ ಅನಿಷ್ಟಗಳು ನಿವಾರಣೆಯಾಗುತ್ತದೆ ಎಂಬ ನಂಬಿಕೆ ಮೂಡಿ ಒಂದು ರೀತಿಯ ಆತ್ಮ ಸ್ಥೈರ್ಯ ಮನದಲ್ಲಿ ಮನೆ ಮಾಡುತ್ತದೆ.

2. **<u>ಕಳೆಂಜನ ಕಾರ್ಯ : ಸಾಂಕೇತಿಕ ಗುಣ :-</u>**

ಹೇಸಿಗೆ (ಮಲ) ತಿನ್ನುವ ಭೂತಗಳನ್ನು ಹೆದರಿಸಿ ಅವುಗಳನ್ನು ಒಳಗಟ್ಟಿ ಅವರ ಸ್ಥಾನ ಒಂದು ತಿಂಗಳವರೆಗೆ ತಾನು ಕಸಿದುಕೊಂಡ ಕಳೆಂಜನ ಕೆಲಸಗಳು ಬೇರೆ ಬೇರೆಯಾಗಿದೆ

(1) ಮಾರಿಯನ್ನು ಹೊಡೆದೋಡಿಸುವುದು.

1. ಕ್ರಿಮಿ ಕೀಟಗಳನ್ನು ನಾಶ ಮಾಡುವುದು
2. ದನ-ಕರುಗಳಿಗೆ, ಪ್ರಾಣಿಗಳಿಗೆ ಪೀಡೆ-ರೋಗ ಬಾರದಂತೆ ಮಾಡುವುದು
3. ಗದ್ದೆಗಳ ಕುರಿತು ಎಡರು-ತೊಡರು ಬರದಂತೆ ನೋಡುವುದು
4. ಪೈರು ಸಮೃದ್ಧವಾಗಿ ಬರುವಂತೆ ಮಾಡುವುದು.

(2) ಫಲವತ್ತತೆಯ ಸಂಕೇತವಾಗಿರುವುದು (ಫರ್ಟಿಲಿಟಿ ಕಲ್ಟ್)

ಇದರಲ್ಲಿ ನಾಲ್ಕು ಘಟಕಗಳು ವ್ಯಕ್ತವಾಗುತ್ತದೆ.

1. ಮಾನವ ವರ್ಗ
2. ಭೂ ವರ್ಗ
3. ಸಸ್ಯ ವರ್ಗ
4. ಪ್ರಾಣಿ ವರ್ಗ

ಮಾನ್ಯ ರೋಗಾಂಡ ಕಳೆಂಜಗ್ ಅನ್ನಡ್ ಪರಿಯರಿಪ್ಪುವೊ
ಪಾಸಿರೋಗಂಡ ಕಳೆಂಜಗ್ ಪಲ್ಲಡ್ ಪರಿಯರಿಪ್ಪುವೋ
ಎರ್ಮಂಜಿ ರೋಗಾಂಡ ಕಳೆಂಜಗ್ ನೀರ್‌ಡ್ ಪರಿಯರಿಪ್ಪುವೋ
ಕೋರಿದ ರೋಗಾಂಡ ಕಳೆಂಜಗ್ ಬಾರ್‌ಡ್ ಪರಿಯರಿಪ್ಪುವೋ
ಪುಚ್ಚೆದ ರೋಗಾಂಡ ಕಳೆಂಜಗ್ ಪೇರ್‌ಡ್ ಪರಿಯರಿಪ್ಪುವೋ
ನಾಯಿದ ರೋಗಾಂಡ ಕಳೆಂಜಗ್ ಬೊನ್ಯೊಡ್ ಪರಿಯರಿಪ್ಪುವೋ

ಮನುಷ್ಯ ರೋಗಾಂಡ ಕಳೆಂಜಗ್ ಅನ್ನದಲ್ಲಿ ಪರಿಯರಿಪ್ಪುವೋ

ಹಸುವಿನ ರೋಗವಾದರೆ ಅನ್ನದ ರಾಶಿಯಲ್ಲಿ ಪರಿಹಾರ

ಎಮ್ಮೆಯ ಕರುವಿನ ರೋಗವಾದರೆ ನೀರಿನಲ್ಲಿ ಪರಿಹಾರ

ಕೋಳಿನ ರೋಗವಾದರೆ ಭತ್ತದಲ್ಲಿ ಪರಿಹಾರ

ಬೆಕ್ಕಿನ ರೋಗವಾದರೆ ಹಾಲಿನಲ್ಲಿ ಪರಿಹಾರ

ನಾಯಿಯ ರೋಗವಾದರೆ ಬೂದಿಯಲ್ಲಿ ಪರಿಹಾರ

'ಅವಶ್ಯಕತೆ ಸಂಬಂಧಿಸಿದ ವಿಚಾರ ಮೇಲಿನ ಭಾಗದಲ್ಲಿ ಗುರುತಿಸಿರುವಂತೆ ಇಲ್ಲಿ ಹೇಗೆ ನಿರ್ಧರಿತವಾಗುತ್ತದೆ ಎಂಬುದು ಗಮನಾರ್ಹವಾದದ್ದು. ಆಯಾ ಪ್ರಾಣಿಗೆ ಬರುವ ರೋಗ ಅವು ಸೇವಿಸುವ ಅನ್ನದೊಂದಿಗೆ ಪರಿಹಾರ ಎನ್ನುವುಮ ಅಧಿಕೃತ ವಿಚಾರ. ಪ್ರಾಣಿಗಳಿಗೆ ಅಥವಾ ಇತರ ಜೀವಿಗಳಿಗೆ ಔಷಧಿಯನ್ನು ಕೊಡುವುದು ಅನ್ನದೊಂದಿಗೆ. ಹೀಗಾಗಿ ಇದರ ಪರಿಹಾರ ಪಾಡ್ದನಗಳಿಗೆ ಪ್ರಕಾರ ಅದೇ ಅನ್ನದಲ್ಲಿಯೇ ಹಾದುಹೋಗಲಿ ಎನ್ನುವುದು, ಅಲ್ಲಿಯೇ ಹೋಗುತ್ತದೆ ಎನ್ನುವುದು ಕೂಡಾ ಅವರಿಗೆ ಖಚಿತ. ಇಲ್ಲಿ ಬರುವ ಪರಿಹಾರಕ ಕ್ರಿಯೆಗಳು ಅಷ್ಟೊಂದು ಗಂಭೀರ ಸ್ವರೂಪದವುಗಳಲ್ಲ. ಆದರೆ ಆಚರಣೆಯಲ್ಲಿ ಗಂಭೀರವಾದ ಸ್ವರೂಪವನ್ನು ಕಾಣುತ್ತೇವೆ. ಅಲ್ಲಿ ಸಿಗುವ ನೀಡಿಕೆಯ ವಸ್ತುಗಳು ಗಮನಿಸುವಂಥವು. ಒಂದೊಂದು ನೀಡಿಕೆಯ ವಸ್ತುವಿಗೂ ವಿಶಿಷ್ಟವಾದ ನಿವಾರಣಾ ಶಕ್ತಿ ಇದೆ. ಅವುಗಳನ್ನು ಜನಪದದಲ್ಲಿ ಸಾರ್ವತ್ರಿಕವಾಗಿ ಈಗಲೂ ವೈದ್ಯಕೀಯಕ್ಕೆ ಬಳಕೆಯೂ ಇದೆ. ಹಾಗೂ ದೃಷ್ಟಿದೋಷದ ನಿವಾರಣೆಗೂ ಬಳಕೆಯಾಗುತ್ತದೆ.

ದುಃಖಕ್ಕೆ ಉಪ್ಪು

ತಾಪಕ್ಕೆ ಮೆಣಸು

ಮಾರಿಗೆ ಮಾವಿನಕಾಯಿ

ದುಷ್ಟಶಕ್ತಿಯ ಪೀಡೆಗೆ ಅರಿಶಿನ ದಾರಿದ್ರ್ಯಕ್ಕೆ ಮಸಿ

ಹೀಗೆ ಪಾಡ್ದನದಲ್ಲಿ ಬಯಸುವಂತಲ್ಲದೆ, ರೋಗ ಮತ್ತು ರೋಗಕ್ಕೆ ತಕ್ಕಂತೆ ಪರಿಹಾರದ ಮೂಲಿಕೆಗಳು ಇವೆ. ಇದರಿಂದ ಸ್ಪಷ್ಟವಾಗುವ ವಿಷಯವೇನೆಂದರೆ ಕಳೆಂಜನ ಶಕ್ತಿ ವೈದ್ಯಕೀಯಕ್ಕೆ ಸಂಬಂಧಪಟ್ಟುದಾಗಿದೆ. ಹೀಗಾಗಿ ಇಲ್ಲಿ ಈತ 'ಜನಪದ ಮದ್ದುಗಾರ (ವೈದ್ಯ), (ಪೊ.ಕೆ.ಡಾಕ್ಟರ್)ನಾಗಿ ಬಂದಿರುವುದು ಸ್ಪಷ್ಟವಾಗಿದೆ.

೮. <u>ಆಟಿ ಕಳೆಂಜ ಪ್ರದರ್ಶನದಲ್ಲಿನ ಭಿನ್ನತೆ :-</u>

ಬುಡಕಟ್ಟುಗಳು ಹಾಗೂ ಮಾನವ ಜಾತಿಗಳ ಕುರಿತಾಗಿ ಹಲವು ಅಧ್ಯಯನಗಳು ಈಗಾಗಲೇ ನಡೆದಿವೆ. ಅಂತೆಯೇ ಆಟಿ ಕಳೆಂಜ ವೇಷಧರಿಸುವ ಜನಾಂಗದ ಕುರಿತಾಗಿಯೂ ವಿವಿಧ ಪರಿಕಲ್ಪನೆಗಳನ್ನಾಧರಿತ ಐರಿಹಾಸೋಕ್ತವಾದ ವಿವರಣೆಗಳು ಹಲವು ಪುಸ್ತಕಗಳಲ್ಲಿ ದೊರೆಯುತ್ತವೆ. "ಮುಗೇರರು" ಒಂದು

ಪ್ರೌಢಪ್ರಬಂಧವಾಗಿದ್ದು ಇದು ಕುಣಿತಗಳ ಪ್ರದರ್ಶನ ಮತ್ತು ಸಾಹಿತ್ಯವನ್ನು ಆರಾಧಿಸಿಕೊಂಡು ಪ್ರದರ್ಶನ ಸಿದ್ಧಾಂತದ ಹಿನ್ನೆಲೆಯಲ್ಲಿ ಡಾ॥ ಅಭಯ ಕೌಕ್ರಾಡಿಯವರು ಬರೆದಿರುವ ಸಂಶೋಧನ ಗ್ರಂಥ.

'ಆಟಿ ಕಳೆಂಜ' ಮುಗೇರರ ಆಚರಣಾತ್ಮಕ ಕುಣಿತ, ಆಟಿಕಳೆಂಜ ಪ್ರದರ್ಶನದವರು ತಮ್ಮವರೊಡನೆ ಒಟ್ಟು ಸೇರಿ ಕಳೆಂಜ ಕಟ್ಟುವುದರ ಕುರಿತಾಗಿ ತೀರ್ಮಾನಿಸಿರುತ್ತಾರೆ. ಆಟಿ ತಿಂಗಳ ಹುಣ್ಣಿಮೆಯ ದಿನದಿಂದ ಕಳೆಂಜ ಕಟ್ಟುತ್ತಾರೆ. ಶುದ್ಧವಾಗಿ ಬಂದು ಕಳೆಂಜ ಕಟ್ಟಲು ಬಂದ ಇಬ್ಬರು ಪಾತ್ರಿಗಳು 'ಕಾಪಡ'ನೊಂದಿಗೆ ಬಂದು ಬಿರ್ಮೆರಿಗೆ ನಿವೇದನೆಯನ್ನು ಮಾಡಿಕೊಳ್ಳುತ್ತಾರೆ. 'ಪಾರ್ತನದಲ್ಲಿ ವ್ಯಕ್ತವಾಗುವ ಬಿರ್ಮರ ಸ್ವರೂಪಕ್ಕೂ ಆಟ ಕಳೆಂಜದ ಪದರ್ಶನದ ಸಂದರ್ಭದಲ್ಲಿ 'ಬಿರ್ಮೆರ ಮಾನಿ' ಅಂದರೆ ಬಿರ್ಮರ ಸೇವಕ ಎಂದು ಗುರುತಿಸಲಾಗಿದೆ. ಬಿರ್ಮರಿಗೂ ಕಳೆಂಜನಿಗೂ ಒಡೆಯ ಆಳನ ಸಂಬಂಧವಿದೆ ಎಂಬಂತೆ ಪಾರ್ತನಗಳಂದ ವ್ಯಕ್ತವಾಗುತ್ತದೆ". (ಮುಗೇರರು -159) ಬಿರ್ಮೆರನ್ನು ನಿವೇದನೆ ಮಾಡಿಕೊಂಡ ಬಳಿಕ ಕಳೆಂಜ ವೇಷ ಹಾಕುತ್ತಾರೆ.

ಪೂರ್ವೋಕ್ತವಾಗಿರುವಂತೆ ಆಟಿ ಕಳೆಂಜ ನಲಿಕೆಯವರಲ್ಲಿಯೂ ಕಂಡು ಬರುತ್ತದೆ. ಮುಗೇರ-ನಲಿಕೆಯವರ ಆಟಿ ಕಳೆಂಜದಲ್ಲಿ ಸಾಮ್ಯತೆಯೂ ಇದ್ದು ಅದಾಗ್ಯೂ ಭಿನ್ನತೆ ಇಲ್ಲದೆಯು ಇಲ್ಲ. ಎರಡು ಪಂಗಡದಲ್ಲೂ 'ಕಳೆಂಜ' ಆಟಿಯಲ್ಲಿಯೇ ಬರುತ್ತಾನೆ. ಮಾರಿ ಕಳೆಯುವ ಸಮಾನ ಆಶಯವೂ ಇದೆ. ಕಳೆಂಜ ಪೂಜೆಯಲ್ಲಿಯೂ ಕುಣಿತದಲ್ಲಿಯೂ ಎರಡು ಪಂಗಡದಲ್ಲಿ ಸಾಮ್ಯತೆ ಇದೆ. ಭಿನ್ನತೆಯ ಕುರಿತು ಹೇಳುವುದಾದರೆ ಮುಗೇರರಲ್ಲ 'ದುಡಿ' ಇದ್ದರೆ, ನಲಿಕೆಯವರಲ್ಲಿ 'ತೆಂಬರೆ' ಬಳಕೆಯಾಗುತ್ತದೆ. ನಲಿಕೆಯವರಲ್ಲಿ ಚಿಕ್ಕಮಕ್ಕಳಿಗೆ ಕಳೆಂಜ ವೇಷ ಹಾಕಿದರೆ ಮುಗೇರರಲ್ಲಿ ಪುರುಷರಿಗೆ ವೇಷ ಹಾಕುತ್ತಾರೆ. ಮುಗೇರರ ಕಳೆಂಜದಲ್ಲಿ ಅಲಂಕಾರಕ್ಕಾಗಿ ಜೇಡಿಮಣ್ಣು ಮತ್ತು ಕೆಂಪು ಬಣ್ಣವಿದ್ದಾರೆ, ಬಣ್ಣದ ಬಟ್ಟೆಯನ್ನು ನಲಿಕೆಯವರು ಧರಿಸುತ್ತಾರೆ. ಒಟ್ಟಿನಲ್ಲಿ ಪ್ರಧಾನಂಶವಾಗಿ ಹೇಳುವುದಾದರೆ ಕಳೆಂಜ ಈ ಎರಡು ವರ್ಗದವರಲ್ಲಿಯೂ ಆಟಿ ತಿಂಗಳಲ್ಲಿ ಹಗಲು ಹೊತ್ತಿನಲ್ಲಿ ಸಂಚಾರದಲ್ಲಿ ಮಾರಿ ಕಳೆಯುವ ಆಶಯದೊಂದಿಗೆ ಬರುವ ಆಚರಣಾತ್ಮಕ ಕುಣಿತ.

ಭೂತಾರಾಧನೆಯ ಪ್ರದರ್ಶನ ಹಾಗೂ ಆಟಿ ಕಳೆಂಜ ಪ್ರದರ್ಶನದಲ್ಲಿ ಬಹಳ ಮುಖ್ಯವಾದ ಒಂದು ವ್ಯತ್ಯಾಸವಿದೆ. ಭೂತಾರಾಧನೆಯಲ್ಲಿ ಭೂತಗಳು ಗ್ರಾಮದ ಜನರೆಲ್ಲ ಒಂದೆಡೆ ಸೇರಿರುವ ವೇಳೇ ಒಂದು ನಿಗದಿತವಾದ ಜಾಗದಲ್ಲಿ ಆರಾಧನೆಯನ್ನು ಪಡೆದುಕೊಳ್ಳುತ್ತವೆ. ಆದರೆ ಆಟಿ ಕಳೆಂಜನು ಹಾಗಲ್ಲ ಕಷ್ಟ ಕಾರ್ಪಣ್ಯಗಳು ಕೋಟಲೆಗಳು ತುಂಬಿರುವ ಆಟಿ ತಿಂಗಳನಲ್ಲಿ ತುಳುನಾಡಿನ ಮನೆಮನೆಗೆ ಸಂಚರಿಸಿ ನೊಂದ, ಸಂಕಷ್ಟದಲ್ಲಿರುವ ಜನರಿಗೆ ಅವರ ಮನಸ್ಸಿನ ಧೈರ್ಯ- ಆತ್ಮಸ್ಥೈರ್ಯ ತುಂಬಿ ಸಂರಕ್ಷಣೆ ಮಾಡುತ್ತಾನೆ. ಭೂತಾರಾಧನೆಯ ಪ್ರದರ್ಶನ ಉದ್ದೇಶ ಜನರ ಸಂರಕ್ಷಣೆಯಾದರೂ, ಸಂರಕ್ಷಣೆ ಮಾಡುವ ರೀತಿ ನೀತಿಗಳು ಭಿನ್ನವಾಗಿ ತೋರಲ್ಪಡುತ್ತದೆ. (ಆಟಿಡ್ ಬತ್ತೆನಾ ಕಳೆಂಜ ಮಾರಿ ಕಳೆಸೆನೋ "(ಆಟಿಯಲ್ಲಿ ಬಂದ ಕಳೆಂಜ ಮಾರಿ ಕಳೆಯುವನೋ)" (ಮೂಡಾಯಿತ್ ಮಾರಿನ್ ಮೂಡಾಯಿಗ್ ಕೊಂಡೊವೆನೊ" (ಮೂಡಣದ ಮಾರಿಯಮ್ಮ ಮೂಡಣದೂರಿಗೆ ಸಾಗಿಸುವವನು) ಎನ್ನುವುದು ಆಟಿ ಕಳೆಂಜನ ಪಾಡ್ಡನದಲ್ಲಿ ಸ್ಪಷ್ಟವಾಗಿದೆ. (ಜನಪದ ಸುತ್ತಮುತ್ತ - ವಾಮನ ನಂದಾವರ ಪು.ಸಂ.20) "ಆಟಿಡ್ ಬರ್ಪೆನೊ ಕಳೆಂಜೆ ಮಾರಿ ಕಳೆಪೆನೊ" ಎಂಬ ಲೇಖನದಲ್ಲಿ "ಕಳೆಂಜನ ವೇಷಭೂಷಣದಲ್ಲಿ ಪ್ರಾದೇಶಿಕವಾಗಿ

ಕೆಲವೊಂದು ವ್ಯತ್ಯಾಸಗಳು ಇರುತ್ತವೆ" ಎಂಬ ಉಲ್ಲೇಖವಿದೆ. (ವಿಜಯಕರ್ನಾಟಕ - ತುಳು ಚಾವಡಿ - ಮಂಗಳವಾರ 05 ಆಗಸ್ಟ್ 2014) ಶರತ್ ಕುಮಾರ್ ಜೋನ್ಸ್, ಕಲ್ಯಾಣಪುರ, ಉಡುಪಿ.

೬. **ಆಟಿಕಳೆಂಜ ಮತ್ತು ಜೋಕುಮಾರನಲ್ಲಿಯ ಸಾಮ್ಯತೆಗಳು :-**

ಕಳೆಂಜನಂತೆ ಜೋಕುಮಾರನು ಗ್ರಾಮಾಚರಣೆಯ ಶಕ್ತಿ. ಒಂದರ್ಥದಲ್ಲಿ ಇವೆರಡೂ ಕ್ಷುದ್ರ ದೇವತೆಗಳು. ಇವುಗಳಲ್ಲಿ ಸಾಕಷ್ಟು ಸಾಮ್ಯತೆ ಇರುವುದು ಕಂಡುಬರುತ್ತವೆ. ಈ ಸಾಮ್ಯತೆಯನ್ನು ಗುರುತಿಸುವುದಕ್ಕೆ ದೇವತೆಯ ವರ್ಣನೆ ಮಾಡುವ ಬಗೆ, ದೇವತೆಯ ಹಿಂದಿರುವ ಕಥೆಗಳು, ಆಚರಣೆಯಲ್ಲಿ ಬಳಕೆಯಾಗುವ ವಸ್ತುಗಳು ದೇವತೆಗಳ ಗುಣಲಕ್ಷಣಗಳು ಇಂಥವೆಲ್ಲ ಈ ಲೇಖನಕ್ಕೆ ಆಹಾರವಾಗುತ್ತದೆ. ಮುಂದೆ ಒಂದೊಂದಾಗಿ ಅವುಗಳನ್ನು ಗಮನಿಸುತ್ತಾ ಹೋಗಬಹುದು.

ಭೂಲೋಕದಲ್ಲಿಯ ಸುಖ - ದುಃಖವನ್ನು ತಿಳಿಯುವುದಕ್ಕಾಗಿ ಶಿವ, ಗಣಪತಿಯನ್ನು ಕಳಿಸಿದರೆ, ಮೋದಕಾನ್ನಗಳನ್ನು ಭುಂಜಿಸಿ ಮೆರೆದು ಹೋದ ಗಣಪತಿಯನ್ನು ಶಿವನ ಮುಂದೆ ಜಗತ್ತಿನಲ್ಲಿ ಎಲ್ಲಿ ನೋಡಿದರೂ ಸುಖವೇ ಉಂಟೆಂದೂ ಆ ಸುಖವನ್ನುಂಡು ತೇಗಿ ತೊರೆದು ಉಬ್ಬಬಂದೆ ಎಂದು ಹೇಳಿದನಂತೆ. ಜೋಕುಮಾರ ತಿನ್ನದೆ ಉಣ್ಣದೆ ಉಡದೆ ತಲೆ ಒಡೆಸಿಕೊಂಡು ಹೋಗಿ ಶಿವನ ಮುಂದೆ ಲೋಕದ ದುಃಖದ ಕಥೆಯನ್ನು ಹೇಳಿದನಂತೆ ಗಣಪತಿಯ ಮಾತಿಗೆ ಕಣ್ಣು ತೆರೆಯದೆ ಶಿವ ಜೋಕುಮಾರನ ಮಾತಿಗೆ ಕಣ್ಣು ತೆರೆದು ನೋಡಿದ ಎನ್ನುವ ಬಿಡಿ ಕತೆಗಳು ಸಿಗುತ್ತವೆ.

ಕಳೆಂಜನ ಕುರಿತು ಪಾಡ್ದನದಲ್ಲಿ ಬರುವ ಕಥೆಯೆಂದೇ ಪರಮಾತ್ಮ ಧರ್ಮಪರಿಪಾಲನೆಗೆ ಭೂತ ಸೃಷ್ಟಿಸಿ ಭೂಮಿಗೆ ಕಳುಹಿಸಿದ. ಧರ್ಮಾತ್ಮರಿಗೆ ರಕ್ಷೆ ಪಾಪಾತ್ಮರಿಗೆ ಶಿಕ್ಷೆ ನೀಡುವುದಕ್ಕೆ ಬೇಕಾದ ವ್ಯವಸ್ಥೆ ಮಾಡಿದ್ದ. ಈ ವ್ಯವಸ್ಥೆ ಹಾಗೆ ನಡೆದಿದೆ ಪರಮಾತ್ಮನಲ್ಲಿ ಜನರಿಗೆ ಎಷ್ಟೊ ನಂಬಿಕೆ ಇದೆ, ವಿಶ್ವಾಸವಿದೆ ಎಂಬುದನ್ನು ತಿಳಿಯಲು ಕಳೆಂಜನಿಗೆ ಕಳುಹಿಸಿದ ಕಳೆಂಜ ಭೂಲೋಕವನ್ನು ಸುತ್ತಿ ಭೂತಗಳ ಬಗ್ಗೆ ವಿವರವನ್ನು ಕೊಟ್ಟನೆಂದು ಬರುತ್ತದೆ.

ಈ ಎರಡೂ ಕಥೆಗಳಲ್ಲಿ ಒಂದು ಅಂಶ ನಮ್ಮ ಗಮನಕ್ಕೆ ಬಾರದಿರದು, ಅದೆಂದರೆ ಕಳೆಂಜ ಮತ್ತು ಜೋಕುಮಾರ ಇಬ್ಬರೂ ಶಿವನ ದೂತರಿ. ಇವರು ಭೂಲೋಕದ ಸುಖ - ದುಃಖವನ್ನು ವಿಚಾರಿಸಿ ಶಿವನಿಗೆ ವರದಿ ಒಪ್ಪಿಸುವುದಕ್ಕೆ ಬಂದವರೇ ಎಂಬುದು ಕಳೆಂಜ ಪರಾಕ್ರಮಿ ಎನ್ನುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಹಾಗೆಯೇ ಜೋಕುಮಾರನೂ ಪರಾಕ್ರಮಿ ಅಎಂದು ಹಾಡುಗಳಲ್ಲಿದೆ. ಅದೂ ಅಲ್ಲದೆ ಜೋಕುಮಾರನಿಗೆ ಯಾವಾಗಲೂ ಹಣೆಗೆ ಕುಂಕುಮದ ನಾಮವಿರುವುದು ಗಮನಾರ್ಹ ಏಕೆಂದರೆ ಅದು ವೀರತೆಯ ಸಂಕೇತ (ಆದರೆ ಜೋಕುಮಾರನ ಪರಾಕ್ರಮ ಭಿನ್ನ ಆಶಯದಲ್ಲಿ ವ್ಯಕ್ತವಾಗಿರುವುದು ಕಂಡು ಬರುತ್ತದೆ).

ಜೋಕುಮಾರ ಏಳು ದಿನ ಬದುಕಿದ ಅದಕ್ಕೆಂದೇ ಅವನು ಊರಲ್ಲಿ ಏಳು ದಿನಗಳು ಮಾತ್ರ ಸಂಚರಿಸುತ್ತಾನಂತೆ ಜೋಕುಮಾರನ ಬೆಳವಣಿಗೆಯೂ ಅದ್ಭುತ ಬದುಕಿದ ಏಳು ದಿನಗಳಲ್ಲಿಯೇ.

ಹುಟ್ಟಿದೇಳು ದಿವಸಕೆ ಪಟ್ಟಣವ ತಿರುಗ್ಯಾನ'
ಆರೇಳು ದಿನಕೇನೆ ಆಳಿದನೆ ರಾಜವ'
ಎನ್ನುವ ವಿಚಾರ ಬರುವುದರ ಜೊತೆಗೆ ಆತ ಅರಸನಾಗಿ ರಾಜ್ಯವನ್ನು ಆಳಿದ್ದರ ಬಗ್ಗೆ ತಿಳಿಸುತ್ತದೆ.

ಕಳೆಂಜ ಸಾವಿನ ಬಗ್ಗೆ ಸ್ಪಷ್ಟವಾದ ವಿಚಾರಗಳು ಸಿಗುವುದಿಲ್ಲ. ಆದರೆ ಸಾಂಪ್ರಾದಾಯಿಕವಾದ ಆಚರಣೆಗಳಲ್ಲಿ ಆಟಿಯ ಒಂದು ತಿಂಗಳು ಮಾತ್ರ ಸಂಚರಿಸುತ್ತಾರೆ. ಅನಂತರದಲ್ಲಿ ಜೋಕುಮಾರನಿಗೆ ತಲೆ ಒಡೆದು ಹಾಳು ಮಾಡಿದಂತೆ. ಕಳೆಂಜನ ಉಡುಗೊರೆಯನ್ನು ಹರಿಯುವ ನೀರಲ್ಲಿ ಒಯ್ದು ಎಸೆಯಲಾಗುತ್ತದೆ. (ಇದೂ ಒಂದು ಬಗೆಯಲ್ಲಿ ಸಾವಿನ ಅರ್ಥವನ್ನೇ ಹೇಳುತ್ತದೆ ಇದೇ ಬಗೆಯ ಸಂಪ್ರದಾಯಗಳು ಜನಪದರಲ್ಲಿ ಸಾಕಷ್ಟು ದೊರೆಯುತ್ತವೆ.) ಜೋಕುಮಾರನಂತೆ ಕಳೆಂಜನ ಬೆಳವಣಿಗೆಯೂ ಅದ್ಭುತವಾದುದು.

## ೧೦. <u>ಆಟಿ ಕಳೆಂಜ ಮತ್ತು ಜೋಕುಮಾರನಲ್ಲಿಯ ಭೇದಗಳು :-</u>

ಗ್ರಾಮಾಚರಣೆಯ ದೇವತೆಗಳಾದ ಈ ಇಬ್ಬರಲ್ಲಿ ಬರುವ ಸಾಮ್ಯತೆಯನ್ನು ಗಮನಿಸಿಯಾದ ಮೇಲೆ ಅವರಿಬ್ಬರಲ್ಲಿ ಇರುವ ಅಂತರವನ್ನೂ ಗಮನಿಸುವುದು ಅಗತ್ಯ. ಹಾಗಾಗದಿದ್ದರೆ ಈ ಪ್ರಬಂಧ ಅಪೂರ್ಣವೆನಿಸುತ್ತಾರೆ. ಮೇಲುನೋಟಕ್ಕೆ ಕೆಲವು ಭಿನ್ನತೆಗಳು ಕಂಡು ಬಂದರೂ ಅವು ಮೌಲಿಕ ಅಥವಾ ಅಷ್ಟು ಸಂಕೀರ್ಣವೆನ್ನುವ ವಿಚಾರಗಳೇನೂ ಅವುಗಳಲ್ಲಿ ಕಂಡು ಬರುವುದಿಲ್ಲ. ಒಂದೊಂದು ಬಗೆಯ ಭಿನ್ನತೆ ಸಮಾಧಾನಕರವಾದ ಉತ್ತರಗಳೂ ಸಿಗುತ್ತವೆ. ಈಗ ಅವುಗಳಲ್ಲಿ ಒಡೆದು ಕಾಣುವ ಅಂತರಗಳನ್ನು ಗಮನಿಸಬಹುದು.

ಮೂರ್ತಿಯ ರೂಪದಲ್ಲಿ ಪೂಜೆಗೊಳ್ಳುವ ಜೋಕುಮಾರ, ಮೂರ್ತಿಯಲ್ಲಿಯೂ ವಿಶೇಷತೆಯನ್ನು ಪಡೆದಿದ್ದಾರೆ. ಅದೆಂದರೆ, ಆತನ ಜನನೇಂದ್ರಿಯ ಹಿರಿದಾಗಿದ್ದು, ತಕ್ಷಣವೇ ಆಕರ್ಷಿಸುವಂತಹದು (ಶಿಶ್ನ ಹಿರಿದಾಗಿರುವುದಕ್ಕೆ ಬೇರೆ ಬೇರೆ ಕಾರಣಗಳಿವೆ. ಮತ್ತು ಆತನ ಬೆಳವಣಿಗೆಯ ಬಗೆಯಲ್ಲಿಯೂ ಬೇರೆ ಬೇರೆ ಹಂತಗಳಿವೆ. ಅದೆಲ್ಲ ಅಲ್ಲಿ ಪ್ರಸ್ತಾಪಿಸುವುದು ಸಮಂಜಸವಲ್ಲವೆಂದು ಕೈ ಬಿಡಲಾಗಿದೆ. ಮೂರ್ತಿ ಪೂಜೆಗೊಳಗಾದ ಆಟಕಳೆಂಜನ ವೇಷವನ್ನು ಹತ್ತರಿಂದ ಹದಿನಾರು ವರ್ಶದ ಹುಡುಗರು ಮಾತ್ರ ಹಾಕುತ್ತಾರೆ. ಈ ಎರಡು ಶಕ್ತಿಗಳಲ್ಲಿ ಕಾಣುವ ವ್ಯತ್ಯಾಸವಿದು.

ಕಳೆಂಜ ಮತ್ತು ಜೋಕುಮಾರರಲ್ಲಿ ಹೀಗೆ ಕೆಲವೊಂದು ಬದಲಾವಣೆ ಕಂಡುಬಂದರೂ ಅವು ಅಷ್ಟೊಂದು ಇಲ್ಲದವುಗಳಾಗಿ ನಿಲ್ಲುತ್ತವೆ. ಈ ಭೇದಕ್ಕಿಂತಲೂ ಅಧಿಕೃತವಾಗಿ ಸಾಮ್ಯತೆ ಇರುವುದರಿಂದ ಜೋಕುಮಾರ ಮತ್ತು ಕಳೆಂಜ ಇಬ್ಬರು ಒಂದೇ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಎರಡೂ ಗ್ರಾಮಾಚರಣೆಯ ದೇವತೆಗಳು ಒಂದೇ ಎಂದು ಒಪ್ಪಿದೆ ಆದರೆ ಜೋಕುಮಾರ ಹೆಚ್ಚಾಗಿ ಕರ್ನಾಟಕದಾದ್ಯಂತ ವ್ಯಾಪಿಸಿರುವಂತಾಗುತ್ತದೆ. ಅಷ್ಟೇ ಅಲ್ಲದೆ ಕರ್ನಾಟಕದ ಗಡಿಯನ್ನು ದಾಟಿ ಕೇರಳದಲ್ಲಿಯೂ ಕಾಲೂರಿದ್ದಾನೆಂದಾಗುತ್ತದೆ.

# ಅಧ್ಯಾಯ 4

## ಆಟಿಯ ಜನಪದ ಕ್ರೀಡೆಗಳು

### ಅ. ಕ್ರೀಡೆಗಳ ಮಹತ್ವ

ಆಟಿ ತಿಂಗಳಲ್ಲಿ ಕೂಡು ಕುಟುಂಬದ ಎಲ್ಲಾ ಸದಸ್ಯರಿಗೆ ಬಿಡುವು. ಜೇಷ್ಠ ಕಾರ್ತೆಲ್ ತಿಂಗಳುಗಳಲ್ಲಿ ಬಿಡುವಿಲ್ಲದ ದುಡಿಮೆ. ಆ ಸಮಯದಲ್ಲಿ ದುಡಿಮೆಯ ಕಾರಣಕ್ಕೆ ವಿರಾಮವಿದ್ದರೂ ಯಾರ ಮುಖದಲ್ಲೂ ಬೇಸರವಿರುವುದಿಲ್ಲ. ತಮ್ಮ ತಮ್ಮ ಕೆಲಸ ಕಾರ್ಯಗಳನ್ನು ಕಷ್ಟದಿಂದಲೇ ಇಷ್ಟಪಟ್ಟು ಮಾಡುತ್ತಾರೆ. ಅಂದು ಇಂದಿನಂತೆ ಸಾರ್ವತ್ರಿಕವಾಗಿ ಆಡುವ ಒಳಾಂಗಣ ಕ್ರೀಡೆಗಳಿರಲಿಲ್ಲ. ತುಳುನಾಡಿನ ಮನೆಯ ಒಳ ಆವರಣಕ್ಕೆ ಹೊಂದಿಕೊಂಡು ಆಡುವ ಕೆಲ ಆಟಗಳಿಗೆ ತನ್ನದೇ ಅದ ಸೊಬಗಿರುವುದನ್ನು ಗಮನಿಸಬಹುದು. ಚೆನ್ನೆಮಣೆ ಆಟ, ಪೊಕ್ಕು, ಸರಿಮುಗುಳಿ, ಎದ್‌ರ್ ಕತೆ (ಒಬ್ಬರ ಒಗಟಿಗೆ ಇನ್ನೊಬ್ಬರು ಉತ್ತರಿಸುವುದು) ಈ ಎಲ್ಲ ಆಟಗಳೂ ಮನಸ್ಸಿಗೆ ಮುದ ನೀಡುತ್ತಿದ್ದವು. ಡಾ॥ ಗಣನಾಥ ಎಕ್ಕಾರು ಇವರು 'ತುಳುನಾಡಿನ ಜನಪದ ಆಟಗಳು' ಎಂಬ ಸಂಶೋಧನ ಗ್ರಂಥದಲ್ಲಿ 'ಮನುಷ್ಯನ ಬದುಕಿನಲ್ಲಿ ಆಟಗಳಿಗೆ ಪ್ರಧಾನವಾದ ಸ್ಥಾನವಿದೆ. ಪ್ರತಿ ವ್ಯಕ್ತಿ ತನ್ನ ಬದುಕಿನುದ್ದಕ್ಕೂ ವಿವಿಧ ಬಗೆಯ ಆಟಗಳೊಂದಿಗೆ ಅನ್ಯೋನ್ಯ ಸಂಬಂಧಗಳನ್ನು ಇರಿಸಿಕೊಂಡಿರುತ್ತಾರೆ. ಮನುಷ್ಯನ ಸಾಮಾಜಿಕ ಸಂಬಂಧಗಳು ಮತ್ತು ಆಟಗಳ ವಿನ್ಯಾಸಗಳ ನಡುವೆ ನಿಕಟ ಸಂಬಂಧವಿದ್ದು ಈ ಸಂಬಂಧದ ಹಿನ್ನೆಲೆಯಲ್ಲಿಯೇ ಆಟಗಳು ರೂಪುಗೊಂಡಿದೆ. ಆಟಗಳು ಮನುಷ್ಯನ ಬಾಲ್ಯದ ಪ್ರಾಥಮಿಕ ಅವಶ್ಯಕತೆಗಳಲ್ಲಿ ಒಂದು. ಬಾಲ್ಯದಲ್ಲಿ ವ್ಯಕ್ತಿಯೂ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಆಟಗಳ ಪ್ರಕ್ರಿಯೆಗೆ ಒಳಗಾಗಿರುತ್ತಾನೆ. ಕೇವಲ ಮನರಂಜನೆಗಾಗಿ ಆಟಗಳಿವೆ ಎಂದೆನಿಸಿದರೂ ಅದನ್ನು ಮೀರುವ ಸಾಮಾಜಿಕ ಉದ್ದೇಶಗಳನ್ನು ಆಟಗಳು ಹೊಂದಿವೆ. ಪ್ರತಿ ವ್ಯಕ್ತಿಯು ಈ ಅನುಭವವನ್ನು ದಾಟಿಯೇ ಬರುತ್ತಾನೆ. ಈ ದೃಷ್ಟಿಯಿಂದ ಬದುಕಿನೊಂದಿಗೆ ಆಟಗಳಿಗೆ ಅನ್ಯೋನ್ಯ ಸಂಬಂಧವಿರುವುದರಿಂದ ಆಟಗಳ ಅಧ್ಯಯನವೆಂಬುವುದು ಸಂಸ್ಕೃತಿಯ ಪ್ರಮುಖ ಘಟಕವೊಂದರ ಅಧ್ಯಯನವೇ ಆಗಿರುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ತುಳುನಾಡಿನ ಸಂಸ್ಕೃತಿಯೊಂದಿಗೆ ಅನ್ಯೋನ್ಯ ಸಂಬಂಧವನ್ನು ಹೊಂದಿರುವ ಮತ್ತು ತುಳುನಾಡಿನಲ್ಲಿ ಜನಪ್ರಿಯವಾಗಿರುವ ಹತ್ತು ಜನಪದ ಆಟಗಳನ್ನು ಆಳವಾಗಿ ಅಧ್ಯಯನ ಮಾಡಿದ್ದಾರೆ. ತುಳುನಾಡಿನ ಜನಪ್ರಿಯ ಆಟ ಚೆನ್ನೆಮಣೆ. ತುಳುನಾಡಿನ ಸಾಂಸ್ಕೃತಿಕ ಬದುಕಿನ ವಿವರಗಳು ಚೆನ್ನೆಮಣೆ ಆಟದಲ್ಲಿ ಅಭಿವ್ಯಕ್ತಗೊಂಡ ಬಗೆಯನ್ನು ವಿಶ್ಲೇಷಿಸಿದ್ದಾರೆ. ಈ ಆಟ ಕೇವಲ ತುಳುನಾಡಿಗೆ ಸೀಮಿತವಾದ ಆಟವಲ್ಲ. ಆಫ್ರಿಕಾದಿಂದ ಫಿಲಿಫೈನ್ಸಿನವರೆಗೂ ಹಬ್ಬಿರುವ ಈ ಆಟ ಏಷ್ಯಾ ಖಂಡದಲ್ಲಿ ಜನಪ್ರಿಯವಾಗಿದೆ. ತಮಿಳುನಾಡಿನಲ್ಲಿ ಚೆನ್ನೆಮಣೆ ಆಟಕ್ಕೆ ಸಾಂಸ್ಕೃತಿಕ ಮಹತ್ವವಿದೆ. ಆದರೆ ತುಳುನಾಡಿನ ಧಾರ್ಮಿಕ ಮತ್ತು ಸಾಂಸ್ಕೃತಿಕ ಬದುಕಿನಲ್ಲಿ ಈ ಆಟವು ಹೆಚ್ಚು ಮಹತ್ವ ಪಡೆದಿದೆ. (ಪುಟ ಸಂಖ್ಯೆ 105) ಎಂಬ ಅವರ ಅಭಿಪ್ರಾಯದ ಹಿನ್ನೆಲೆಯಲ್ಲಿ ತುಳುನಾಡಿನ ಆಟಿಯ ವಿಶಿಷ್ಟ ಕ್ರೀಡೆ ಚೆನ್ನೆಮಣೆಯ ಬಗ್ಗೆ ಈ ಅಧ್ಯಯನದಲ್ಲಿ

ವಿವರವಾಗಿ ವಿಶ್ಲೇಷಣೆ ನಡೆಸಲಾಗುವುದು. ಈ ನಿಟ್ಟಿನಲ್ಲಿ ಆಟಿ ತಿಂಗಳಿನಲ್ಲಿ ನಡೆಯುವ ಜನಪದ ಕ್ರೀಡೆಗಳ ಬಗ್ಗೆ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಆಟಿ ತಿಂಗಳಿನ ಮಹತ್ವ ಹಾಗೂ ಆ ತಿಂಗಳಿನಲ್ಲಿ ನಡೆಯುವ ಕ್ರೀಡೆಗಳ ನಡುವಣ ಕಂಬಳ ಕ್ರೀಡೆಗಳಿಗೂ ಜನಪರ ಬದುಕು – ಸಾಂಸ್ಕೃತಿಕ ಇರುವ ಅಂತರ್ ಸಂಬಂಧ, ಪ್ರಕೃತಿ – ಸಂಸ್ಕೃತಿ ನಡುವಣ ಸಂಬಂದಗಳು ಈ ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ನಡೆಸಲಾಗುವುದು.

ಕತ್ತಲಾದೊಡನೆ ಬಹುತೇಕ ಮನೆಮಂದಿಯೆಲ್ಲ ಉಂಡು ಮಲಗುವರು. ಹೀಗೆ ಮಾಡುವುದು ದೀಪದ ಎಣ್ಣೆ ಉಳಿಸುವ ಒಂದು ಉದ್ದೇಶವಾಗಿರುವುದು. ಆಟಿಯ ಸಮಯ ಬಹಳ ಕಷ್ಟದ ಕಾಲ ಆದುದರಿಂದ ಜನರು ಬಹಳ ಜಾಗರೂಕತೆಯಿಂದ ಜೀವನವನ್ನು ಸಾಗಿಸುವ ರೀತಿ ಈ ಎಲ್ಲಾ ವಿಚಾರಗಳನ್ನು ಓದಿದಾಗ ಗೋಚರವಾಗುತ್ತದೆ. ಈಗಿನಂತೆ ಆಧುನಿಕ ಸೌಲಭ್ಯಗಳು ವಿದ್ಯುದ್ದೀಪಗಳ ವ್ಯವಸ್ಥೆ ಇಲ್ಲದ ಕಾಲ ಆಧುನಿಕ ಸೌಲಭ್ಯಗಳು, ವಿದ್ಯುದ್ದೀಪಗಳ ವ್ಯವಸ್ಥೆ ಇಲ್ಲದ ಕಾಲ ಮಳೆಗಾಲದ ದಿನಗಳಲ್ಲಿ ಕತ್ತಲಾದೊಡನೆ ಕಣ್ಣು ಕುಕ್ಕಿದರೂ ಪರಿಸರ ಕಾಣದಷ್ಟು ಗಾಢಾಂಧಕರ. ಆದರೆ ಅಷ್ಟು ಬೇಗ ನಿದ್ರೆ ಬರುವುದಿಲ್ಲ.

ಆಗಲೇ ಕುಟುಂಬದ ಹಿರಿಯರಲ್ಲಿ 'ಪಾರ್ದನ' (ತುಳು ದೈವಗಳ ಮತ್ತು ವೀರಪುರುಷರ ಚರಿತ್ರೆಯನ್ನು ಪ್ರಚರ ಪಡಿಸುವ ಜಾನಪದ ಪದ್ಯಗಳು) ಹೇಳುವರೇ ಒತ್ತಾಯ ಪಡಿಸುವರು.

ಪಾರ್ದನದ ಒಂದು ಸೊಲ್ಲನ್ನು ಸ್ವರ ಎತ್ತಿ ರಾಗವಾಗಿ ತನ್ನದೇ ಆದ ಲಯಭರಿತ ಲಹರಿಯಿಂದ ಹಿರಿಯರೊಬ್ಬರು ಹಾಡಲು ತೊಡಗುವರು. ಅದಕ್ಕೆ ಇನ್ನೊಬ್ಬ ಹಿರಿಯ ಹೆಂಗಸು ಸ್ವರ ನೀಡಿ ಅವರ ಹೇಳಿಕೆ ಸೊಲ್ಲನ್ನು ಪುನರುಚ್ಚರಿಸುವಳು. ನಡುವಿರುಳು ತನಕವೂ ಆ ಕಾರ್ಗತ್ತಲ ನೀರವತೆಯಲಿ ನಿರಂತರವಾಗಿ ಈ ಅನುಸಂಧಾನ ಮುಂದುವರಿಯುವುದು. ಇಂತಹ ಜಾನಪದ ಸೊಗಡನ್ನು ಕಂಡು ಕೇಳಿಯೇ ಸಂತಸಪಡಬೇಕು. ಕಪ್ಪೆ, ಜೇರಟೆ, ಬಸವನಹುಳುಗಳ ನವಿರಾದ ಉಲಿತರ ಹಿಮ್ಮೇಳ ನಾದದಲ್ಲಿ ಈ ರೀತಿಯ ಪಾರ್ದನ ಪರಿಸರದ ಮೂರು ನಾಲ್ಕು ಮೈಲುಗಳಷ್ಟು ಮಾತಲ್ಲ. ಇಂದಿನ ಟಿವಿ, ರೇಡಿಯೋ ಮೊದಲಾದವುಗಳ ಮಧ್ಯೆ ಹಳೆಯ ಪರಂಪರೆ ಮೂಲೆ ಗುಂಪಗಿರುವುದಂತೂ ಸತ್ಯ ವಿಚಾರ. ಆಗಿನ ಕಾಲದ ಆಟಗಳು ಕುಟುಂಬ ಸಮೇತ ಎಲ್ಲರೂ ಒಟ್ಟಾಗಿ ಆಟದಲ್ಲಿ ಪಾಲ್ಗೊಳ್ಳುವುದು ಮನೆಯಲ್ಲಿ ಸಂತೋಷದ ವಾತವರಣದ ಸೃಷ್ಟಿಗೆ ಕಾರಣವಾಗುತ್ತಿತ್ತು. ಆಟಿ ತಿಂಗಳಿನಲ್ಲಿ ಎದುರಾಗುವ ಕಷ್ಟವನ್ನು ಈ ಸಂತೋಷ ಮರೆಮಾಡುತ್ತಿದ್ದವು. ಇಡೀ ಕತ್ತಲೆಯನ್ನು ಒಂದು ದೀಪ ಹೋಗಲಾಡಿಸುವಂತೆ ಆ ತಿಂಗಳ ಕಷ್ಟದ ನೋವನ್ನು ಆಟಗಳು ದೂರಮಾಡುತ್ತಿದ್ದವು. ಆದರೆ ಈಗ ಸಂಪ್ರದಾಯಗಳು ಕೂಡುಕುಟುಂಬಗಳು ಮರೆಯಾಗಿರುವ ಲಕ್ಷಣ ಭಾಸವಾಗುವುದು ನಿಜಕ್ಕೂ ವಿಷಾದನೀಯ ಸಂಗತಿಯಾಗಿದೆ. ಪರಂಪರೆಯನ್ನು ಬಯಸುವವರಿಗೆ, ಅನುಭವೀ ಹಿರಿಯರಿಗೆ ಇವೆಲ್ಲ ರಸಗುಲ್ಲ ಸವಿದಂತೆ ಮನ ಮಂದಿರದಲ್ಲಿ ಮರುಕಳಿಸುವುದು ಸಹಜ ಮತ್ತು ಸ್ವಾಭಾವಿಕ.

ಆಟಿ ತಿಂಗಳು ಕೆಲಸವಿಲ್ಲದ ಕಾಲ ಬೇರೆ ಪ್ರದೇಶಗಳಲ್ಲಿ ಈ ಆಟವಿದೆಯಾದರೂ ತುಳುನಾಡಿನಲ್ಲಿ ಚೆನ್ನೆಮಣೆಯಾಟಕ್ಕೆ ಇರುವ ಪ್ರಸಿದ್ಧತೆ ಪ್ರಾಮುಖ್ಯತೆ ಗಮನಾರ್ಹ. ಡಾ|| ಗಣನಾಥ ಎಕ್ಕಾರ್‌ರವರು ತಮ್ಮ 'ಜನಪದ ಆಟಗಳು' ಎಂಬ ಮಹಾಪ್ರಬಂಧದಲ್ಲಿ ಚೆನ್ನೆಮಣೆ ಆಟದ ವಿಶೇಷತೆಯನ್ನು ಅಧ್ಯಯನಕ್ಕೊಳಪಡಿಸಿ ಈ ಮೊದಲೇ

ವಿವರವಾದ ಮಾಹಿತಿಯನ್ನು ನೀಡಿರುತ್ತಾರೆ. ಚೆನ್ನೆಮಣೆ ಆಟಕ್ಕೆ ಸಂಬಂಧಿಸಿದ ಹೆಚ್ಚಿನ ವಿವರಗಳು ಈ ಪ್ರಬಂಧದಲ್ಲಿ ಲಭ್ಯವಾಗುತ್ತದೆ.

ಆಟಿಯ ಮಾಸದ ಕ್ರೀಡೆಗಳು ಎನ್ನುವ ವಿಷಯಕ್ಕೆ ಸಂಬಂಧಿಸಿದ ಕೆಲವೊಂದು ಮಾಹಿತಿಗಳನ್ನು ವಕ್ತೃಗಳಿಂದ, ಕ್ಷೇತ್ರಕಾರ್ಯದಿಂದ ಗ್ರಂಥಗಳಿಂದ ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಆ. <u>ತೆಂಗಿನಕಾಯಿ ಆಟ/ಆಟದ ವಿಧಗಳು :-</u>**

ಈ ಆಟದ ಹೆಸರು ಕೇಳಿದಾಗಲೇ ಈ ಆಟ ಮನರಂಜನೆಯ ಗೂಡು ಆಗಿರಬಹುದು ಎಂದು ಊಹಿಸುವುದು ಅನಿವಾರ್ಯ. ತುಳುನಾಡಿನಲ್ಲಿ ಜನಬಿಡುವಿನ ವೇಳೆಯಲ್ಲಿ ವಿಶೇಷವಾಗಿ ಮಳೆಗಾಲದಲ್ಲಿ ತೆಂಗಿನಕಾಯಿ ಆಟವನ್ನು ಬಹಳವಾಗಿ ಮೆಚ್ಚಿಕೊಂಡಿದ್ದರು. ಆ ಕಾಲ ಇಂದಿನಂತಲ್ಲ. ಸಂಜೆಯ ವೇಳೆಗೆ ಊರಿನ ಯುವಕರು ಪೇಟೆಯ ಬಳಿ ಮೈದಾನದಲ್ಲಿ ನೆರೆಯುವರು.

**<u>ತೆಂಗಿನಕಾಯಿ ಆಟದಲ್ಲಿ ಮೂರು ವಿಧ.</u>**

೧. ಸುಮಾರು 10 ಗಜ ಅಂತರದಲ್ಲಿ ಇಬ್ಬರು ನಿಂತು ಒಂದೇ ಸಮಯದಲ್ಲಿ ತೆಂಗಿನಕಾಯಿಯನ್ನು ಪರಸ್ಪರ ಡಿಕ್ಕಿ ಹೊಡೆಯುವಂತೆ ನೆಲದ ಮೇಲೆ ಹಾಯಿಸುವರು. ಒಂದೇ ಆಟದಲ್ಲಿ ಒಂದೇ ಕಾಯಿಯನ್ನು ಉಪಯೋಗಿಸಿ 50 ಕಾಯಿಗಳನ್ನು ಗೆಲ್ಲುವ ಬುದ್ಧಿವಂತರೂ ಇದ್ದಾರೆ.

೨. ಇಬ್ಬರು ಇದಿರು ಬದಿರಾಗಿ ಕುಳಿತು ತೆಂಗಿನಕಾಯಿಗಳನ್ನು ಪರಸ್ಪರ ಡಿಕ್ಕಿ ಹೊಡೆಸಿಕೊಳ್ಳುವರು. ಈ ಪದ್ಧತಿಯಲ್ಲೂ ಕೈಚಳಕ ಮತ್ತು ಬುದ್ಧಿವಂತಿಕೆಯಿಂದ ಒಂದೇ ಕಾಯಿ ಉಪಯೋಗಿಸಿ ತುಂಬ ಕಾಯಿ ಗೆಲ್ಲುವವರೂ ಇದ್ದಾರೆ.

೩. ಮೂರನೇ ವಿಧಾನದಲ್ಲಿ 10 ಅಡಿ ದೂರದಲ್ಲಿ ನೆಲದಲ್ಲಿ ಸಣ್ಣಕುಳಿ ತಯಾರಿಸುವರು. ದೂರದಲ್ಲಿ ನಿಂತು ಆ ಕುಳಿಯ ಒಳಗೆ ತೆಂಗಿನಕಾಯಿ ತಯಾರಿಸುವರು. ದೂರದಲ್ಲಿ ನಿಂತು ಆ ಕುಳಿಯ ಒಳಗೆ ತೆಂಗಿನಕಾಯಿ ಬೀಳುವಂತೆ ಕಾಯಿ ಹೊರಳಿಸುವುದು. ಆ ಕಾಲದಲ್ಲಿ ಇದು ಕೂಡಾ ಮೆದುಳಿಗೆ ನೋವು ನೀಡುವ ಆಟವಾಗಿತ್ತು. ಒಟ್ಟಿನಲ್ಲಿ ತೆಂಗಿನಕಾಯಿ ಆಟವು ಬಹಳ ಮುದ ನೀಡುವ ಮನೋಜ್ಞ ಆಟವಾಗಿರುವುದು.

ಈ ಆಟದಲ್ಲಿರುವ ಬುದ್ಧಿವಂತಿಕೆ ಸಂತೋಷದ ಪ್ರಾಮುಖ್ಯತೆಯನ್ನು ತಿಳಿಯುವಲ್ಲಿ ಯುವಪೀಳಿಗೆ ಸಫಲರಾಗಿಲ್ಲ ಆಟ ಆಡುವುದನ್ನು ಬಿಟ್ಟು ತೆಂಗಿನಕಾಯಿ ಆಟದ ಅರ್ಥವೇ ತಿಳಿದಿರಲೂ ಸಾಧ್ಯವಿಲ್ಲ.

ಜನಪದ ಆಟಗಳಲ್ಲಿ ಒಳಾಂಗಣ ಹಾಗೂ ಹೊರಾಂಗಣ ಆಟಗಳಿವೆ. ರಸಿಕ ಪುತ್ತಿಗೆಯವರು ಮಕ್ಕಳ ಜನಪದ ಆಟಗಳನ್ನು ಒಳಾಂಗಣ ಮತ್ತು ಹೊರಾಂಗಣ ಎಂಬ ವರ್ಗೀಕರಣವನ್ನು ಒಪ್ಪಿಕೊಂಡು ಒಳಾಂಗಣ ಆಟಗಳನ್ನು

೧. ಕುಳಿತಲ್ಲೇ ಆಡುವ ಆಟಗಳು

೨. ನಿಂತು ಓಡಾಡಿ ಆಟಗಳು ಎಂದು ವರ್ಗೀಕರಿಸುತ್ತಾರೆ.

ಹೊರಾಂಗಣ ಅಟಗಳನ್ನು (1) ಸಾಧನಗಳ ಜೊತೆ ಆಡುವ ಆಟಗಳು, (2) ಸಾಧನಗಳಿಲ್ಲದೆ ಆಡುವ ಆಟಗಳೆಂದೂ ಉಪವಿಭಾಗಳನ್ನು ಮಾಡುತ್ತಾರೆ. ಹೊರಾಂಗಣ ಆಟಗಳಲ್ಲಿ ಕೆಸರುಗದ್ದೆ, ಮಳೆಯಾಟ, ತೆಂಗಿನಕಾಯಿ ಆಟ, ಹುಲಿ – ದನ, ಲಗೋರಿ, ಕಣ್ಣಮುಚ್ಚಾಲೆ ಇತ್ಯಾದಿ ಆಟಗಳು ಕಂಡು ಬರುತ್ತದೆ. ಇದನ್ನು ಮಕ್ಕಳು ಮಾತ್ರವಲ್ಲದೆ ಮನೆಯ ಹಿರಿಯರೂ ಆಡುತ್ತಾರೆ. ಆದರೆ ಆಟಿ ತಿಂಗಳನಲ್ಲಿ ಬಹಳ ಜೋರಾದ ಮಳೆ ಸುರಿಯುವುದರಿಂದ ಹೊರಾಂಗಣ ಆಟಗಳನ್ನು ಆಡಲು ಅವಕಾಶಗಳು ಕಡಿಮೆ. ಮಳೆಯಾಟದಲ್ಲಿ ಮಕ್ಕಳು ಕಾಗದದಲ್ಲಿ ದೋಣಿಗಳನ್ನು ಮಾಡಿ ಮಳೆ ನೀರಲ್ಲಿ ಬಿಟ್ಟು ಮನೋರಂಜನೆ ಪಡೆಯುತ್ತಾರೆ. ಆದರೆ ಜೋರಾದ ಮಳೆ ಸುರಿದಾಗ ಈ ಆಟಕ್ಕೂ ಅವಕಾಶ ಕಮ್ಮಿ. ಆದ್ದರಿಂದ ಆಟಿ ತಿಂಗಳನಲ್ಲಿ ಈ ಒಳಾಂಗಣ ಆಟ ಚೆನ್ನೆಮಣೆ ಬಹಳ ಪ್ರಾಮುಖ್ಯತೆಯನ್ನು ಪಡೆದಿದೆ.

**ಇ. <u>ಚೆನ್ನೆಮನೆಯಾಟದ ಅರ್ಥ ಮಹತ್ವ:-</u>**

**ಚೆನ್ನೆಯಾಟ:-** ತುಳುನಾಡಿನ ಜಾನಪದ ಸಂಸ್ಕೃತಿಯಲ್ಲಿ ಚೆನ್ನೆಮಣೆಯಾಟವು ಎಷ್ಟು ಪ್ರಾಚೀನವೋ ಅಷ್ಟೇ ಅರ್ವಾಚೀನವಾಗಿರುವುದು. ಅಂದಿನ ಕಾಲದಲ್ಲಿ ತುಳುನಾಡಿನ ಎಲ್ಲ ದರ್ಗಗಳ ಜನರ ಗ್ರಹಗತಿಗಳಲ್ಲೂ ಚೆನ್ನೆಮಣೆಯು ಶಾಶ್ವತವಾಗಿ ಇರುತ್ತಿತ್ತು. ಬೇರೆ ಸಮಯದಲ್ಲಿ ಮನೆಯ ಅಟ್ಟದಲ್ಲಿ ಭದ್ರನೆಲೆ ಕಂಡಿರುವ ಚೆನ್ನೆಮಣೆ ಆಟಿ ತಿಂಗಳಲ್ಲಿ ಕೆಳಕ್ಕೆ ಬರುವುದು. ಅದರ ಧೂಳು ಕೆಡಹಿ ಚೆನ್ನಾಗಿ ತೊಳೆದು ಆಟಕ್ಕೆ ಸಿದ್ಧಗೊಳಿಸುವರು.



ತುಳುನಾಡಿನ ನುರಿತ ಶಿಲ್ಪಿಗಳ ವಿವಿಧ ಕುಸುರಿ ಕಲೆಗಳನ್ನು ಮೆರೆಸುವ ಸಾಧನವೂ ಚೆನ್ನೆಮಣೆ ಎಂದರೆ ಅದು ಅತಿಶೋಕ್ತಿಯಲ್ಲ. ಹಲಸು, ರೆಂಜೆ, ಸಾಗುವಾನಿ ಮೊದಲಾದ ಒಳ್ಳೆಯ ಜಾತಿಯ ಮೆದು ಮರಗಳಿಂದ ಚೆನ್ನೆಮಣೆ ತಯಾರಿಸುವರು. ಬಲಿತಿರುವ ಮರದ ತುಂಡಿನಿಂದ ಸುಮಾರು ಹದಿನೈದು ಅಂಗುಲ ಉದ್ದ, ಐದು ಅಂಗುಲ ಅಗಲದ ಕೆಳಗಡೆ ಆಧಾರಕ್ಕೆ ಕಾಲುಗಳನ್ನು ದೂರದ ಮೂಲ ತುಂಡಿನಿಂದಲೇ ಜೋಡಿಸಿರುವಂತೆ ಕೆತ್ತುವರು. ಈ ಮಣೆಯ ಉದ್ದನೆಯ ಭಾಗದಲ್ಲಿ ಎರಡು ಸಾಲಿನಲ್ಲಿ ಸಮನಾಂತರ ದೂರದಲ್ಲಿ ವೃತ್ತಾಕಾರದ ಸಣ್ಣಸಣ್ಣ ಏಳು, ಏಳು ಕುಳಿಗಳನ್ನು ಎರಡು ಪಾರ್ಶ್ವದಲ್ಲಿ ಕೆತ್ತಿರುವರು. ಈ ಮಣೆಯ ಉದ್ದನೆಯ ಭಾಗದಲ್ಲಿ ಇಕ್ಕೆಲಗಳಲ್ಲಿ ಚೆನ್ನೆಕಾಯಿಗಳನ್ನು ಶೇಖರಿಸಿಡಲು ವ್ಯವಸ್ಥೆ ಮಾಡುವರು. ಹಿಂದಿನ ಕಾಲದಲ್ಲಿ ಚೆನ್ನೆಮಣೆಗೆ

ಹೊಂಗಾರಕ್ಕನ ಮರದ ಕಾಯಿಗಳನ್ನು ಉಪಯೋಗಿಸುತ್ತಿದ್ದರು. ಇತ್ತೀಚೆಗೆ 'ಕವಡೆ'ಕಾಯಿ 'ಮಂಜಟ್ಟಿ' ಮೊದಲಾದವುಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಉಪಯೋಗಿಸುವರು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಜನಪದ ವಿದ್ವಾಂಸ ಶ್ರೀ ವಾಮನ್‌ನಂದಾವರ್‌ರವರನ್ನು ಭೇಟಿಯಾದಾಗ ಅವರ ಮನೆಯಲ್ಲಿದ್ದ ಚೆನ್ನೆಮಣೆಯನ್ನು ಕಂಡಾಗ ಸಂತೋಷವಾಯಿತು. ನಾವು ನಮ್ಮ ಬಾಲ್ಯದಲ್ಲಿ ಚೆನ್ನಮಣೆಯಾಟವನ್ನು ಬಹಳ ಆಸಕ್ತಿಯಿಂದ ಆಡುತ್ತಿದ್ದೆವು. ಅದರಲ್ಲೂ ಆಟಿ ತಿಂಗಳಲ್ಲಿ ಮನೆಯವರೆಲ್ಲರಿಗೂ ಇದು ಒಳ್ಳೆಯ ಮನರಂಜನೆಯನ್ನು ನೀಡುತ್ತಿತ್ತು. ಗುಲಗಂಜಿ ಕಾಯಿ, ಹುಣಸೆಬೀಜ, ಹೊಂಗಾರದ ಬೀಜಗಳನ್ನು ಚೆನ್ನೆಕಾಯಿ ಇಲ್ಲದಾಗ ಬಳಸುತ್ತಿದ್ದೆವು. ಮಳೆಗಾಲದಲ್ಲಿ ನಮಗೆ ಕೆಲಸವಿರುವುದಿಲ್ಲ. ಮನೆಯಲ್ಲಿರುವ ಹಿರಿಯರು ಈ ಆಟಿಯ ಸಮಯದಲ್ಲಿ ಚೆನ್ನೆಯಾಟವನ್ನು ನಮಗೆ ಕಲಿಸುತ್ತಿದ್ದರು. ಈ ಆಟ ನಮ್ಮಲ್ಲಿ ಉತ್ಸಾಹವನ್ನು ಹೆಚ್ಚಿಸಿ ನಮ್ಮನ್ನು ಕ್ರಿಯಾಶೀಲರನ್ನಾಗಿ ಮಾಡುತ್ತಿತ್ತು ಎಂದರು.

ಚೆನ್ನೆಮಣೆಯ ಆಟದಲ್ಲಿ ಅನೇಕ ರಂಜನೀಯ ಮತ್ತು ಮಿದುಳಿಗೆ ನೀಡುವ ಬುದ್ಧಿವಂತಿಕೆಯ ಆಟಗಳಿರುವುದನ್ನು ನಾವು ತಿಳಿಯುತ್ತೇವೆ. ಹಾಗಾಗಿ ಇಂದಿಗೂ ಈ ಆಟಗಳು ಪೈಪೋಟಿಯ ಸವಾಲೊಡ್ಡುತ್ತಿವೆ. 'ಜೋಡು ಪೆರ್ಗೆ', ಅರಸು – ಪ್ರಧಾನಿ ಮೊದಲಾದ ಮನಮೋಹಕ ಆಟಗಳು ಚೆನ್ನೆಯಲ್ಲಿವೆ. ಇದು ಈ ಕಾಲದ ಚದುರಂಗದಾಟವನ್ನು ನಮಗೆ ನೆನಪಿಸುವುದು.

"ತುಳುನಾಡಿನ ಜನಪದರ ಪೂರ್ವಾಚರದಂತೆ ಚೆನ್ನೆಯಾಟದಲ್ಲಿ ಅಕ್ಕ ತಂಗಿಯರು ಒಂದು ಮಣೆಯಲ್ಲಿ ಇದಿರು – ಬದಿರಾಗಿ ಕುಳಿತು ಆಡುವುದಿಲ್ಲ. ಹೀಗೆ ಆಡುವುದಕ್ಕೆ ನಿಷೇಧವಿದೆ. ಇದಕ್ಕೆ ಬಲವಾದ ಜಾನಪದ ಹಿನ್ನೆಲೆಯಿದೆ. ತುಳು ಜಾನಪದದಲ್ಲಿ ಪ್ರಸಿದ್ಧಿ ಪಡೆದಿರುವ 'ತುಳುನಾಡ ಸಿರಿ' ಪಾರ್ದನದಲ್ಲಿ ಈ ಕುರಿತಾಗಿ ಇರುವ ಒಂದು ರೋಚಕ ಕಥಾನಕವನ್ನು ಇಲ್ಲಿ ಉದಾಹರಿಸಲಾಗಿದೆ. ಸಿರಿಯಮಗಳು, 'ಸೊನ್ನೆ' ಅವಳು ಕುಲದಾಧಿದೇವರು ಮೂಲದ ಆಲಡೆ ನಾಗಬ್ರಹ್ಮರಿಗೆ ಹೇಳಿಕೊಂಡ ಹರಕೆ ಸಂದಾಯವಾಗಿರಲಿಲ್ಲ. ಬೆರ್ಮೆರ್ ವೇಷ ಮರೆಸಿಕೊಂಡು ಮುದಿ ಬ್ರಾಹ್ಮಣನ ರೂಪ ಧರಿಸಿಕೊಂಡು ಮಕ್ಕಳ ಮದುವೆಯ ಹೇಳಿಕೆ ಮಾಡಲು ಹೊರಟಿದ್ದ ಸೊನ್ನೆ ಮತ್ತು ಅವಳ ಪತಿಯನ್ನು ಸಂಧಿಸುತ್ತಾರೆ. ಹರಕೆ ಬಾಕಿ ಇರುವುದನ್ನು ಅವರಲ್ಲಿ ನೆನಪಿಸುತ್ತಾರೆ. ಸೊನ್ನೆ ಸಿಟ್ಟುಗೊಂಡು ಬ್ರಾಹ್ಮಣನನ್ನು ಹೀಯಾಳಿಸಿ ಅಪಮಾನಿಸುವಳು. ಕೋಪಗೊಂಡ ಬೆರ್ಮೆರ್ ಮದುಮಕ್ಕಳಾದ ಅಬ್ಬಗ– ದಾರಗರ ಮನಸ್ಸನ್ನು ಮಾಯೆಯ ಮೋಡಿಗೆ ಒಳಪಡಿಸುವರು. ಅದರ ಪರಿಣಾಮವಾಗಿ ಅಬ್ಬಗ – ದಾರಗೆಯರು ಅರಮನೆಯ ಕಲ್ಲ ಕಲೆಂಬಿ (ಕಲ್ಲಿನಿಂದ ತಯಾರಿಸಿರುವ ಕನಾಟ)ಯ ಬಾಗಿಲು ತೆರೆದು ಒಳಗಿದ್ದ ಚಿನ್ನದ ಚೆನ್ನೆಮಣೆಯನ್ನು ಹೊರತೆಗೆದು ಆಡಲು ತೊಡಗಿದರು. ಆಟದಲ್ಲಿಯ ಹುಚ್ಚಾಟ ಮತ್ತು ಬೆರ್ಮೆರ್ ಮಾಯದ ಬಲುಮೆಯಿಂದ ಸೋಲು ಗೆಲುವಿನ ಕಚ್ಚಾಟದಲ್ಲಿ ತಂಗಿ ಅಕ್ಕನನ್ನು ಚಿನ್ನದ ಚೆನ್ನೆಮಣೆಯಿಂದ ಹೊಡೆದು ಕೊಲ್ಲುವಳು. ನಂತರ ಹೆಣವನ್ನು ಬಾವಿಗೆಸೆದು ತಾನು ಕೂಡಾ ಅದೇ ಬಾವಿಗೆ ಹಾರಿ ಅತ್ಮಾಹುತಿ ಮಾಡಿಕೊಳ್ಳುವಳು. ಮುಂದೆ ಅಬ್ಬಗ ದಾರಗರು ಬೆರ್ಮೆರ್ ದಯೆಯಿಂದ ದೈವತ್ವಕ್ಕೇರುವ ಕತೆ ಬಲು ಸೊಗಸಾಗಿ ಹೆಣೆಯಲ್ಪಟ್ಟಿದೆ. ಈಗಲೂ ಜನಮನದಲ್ಲಿ ಈ ಕತೆ ಪ್ರಚಲಿತವಿರುವುದು ಹಾಗಾಗಿ ತುಳುನಾಡಿನಲ್ಲಿ ಅಕ್ಕ ತಂಗಿಯರು ಜೊತೆಯಲ್ಲಿ ಚೆನ್ನೆಯಾಡುವುದಲ್ಲ. ಈ ಘಟನೆಗೆ

ಪೂರಕವಾಗಿ ತುಳುನಾಡಿನ ಕೆಲವೆಡೆ ತಂದೆ ತಾಯಿಯರು ಮಕ್ಕಳ ಮದುವೆಗೆ ಜೊತೆಯಾಗಿ ಹೇಳಿಕೆ ಮಾಡಲು ಹೋಗುವುದಿಲ್ಲ. ತುಳುವರ ಭಾವನಾತ್ಮಕ ನಂಬಿಕೆಗೆ ಇದೊಂದು ಉದಾಹರಣೆ. (ಆಟಿ, ಸೋಣ, ಬನ್ನಂಜೆ ಬಾಬು ಅಮೀನ್ ಪು.ಸಂಖ್ಯೆ 18-19).]

ಚೆನ್ನೆಮಣೆ ವಿಶ್ವದ ಹಲವಾರು ದೇಶಗಳಲ್ಲಿ ಪ್ರಚಲಿತದಲ್ಲಿರುವುದನ್ನು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ. ಆದರೆ, ಅದು ತುಳುನಾಡಿನ ಬದುಕಿನೊಂದಿಗೆ ಪಡೆದ ನಿಕಟ ಸಂಬಂಧವನ್ನು ಬೇರೆ ಸಂಸ್ಕೃತಿಗಳಲ್ಲಿ ಪಡೆದಂತೆ ಕಾಣುವುದಿಲ್ಲ. ಇದಕ್ಕೆ ಆಯಾ ಸಂಸ್ಕೃತಿಗಳ ಅನನ್ಯತೆಯೇ ಕಾರಣವಾಗುತ್ತದೆ. ಚೆನ್ನೆಮಣೆಯ ಕೆಲವು ಪ್ರಕಾರಗಳ ಆಟದ ರೀತಿ ಕ್ರಮ, ಸ್ವರೂಪಗಳಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲದಿದ್ದರೂ ಅದು ತುಳುನಾಡಿನ ಬದುಕು ಮತ್ತು ಆಚರಣೆಗಳೊಂದಿಗೆ ಪಡೆದ ಸಂಬಂಧವನ್ನು ಆ ಪ್ರದೇಶದಲ್ಲಿ ಪಡೆದಿಲ್ಲ. ತುಳುವರು ಈ ಆಟದೊಂದಿಗೆ ಹೊಂದಿದ ಭಾವನಾತ್ಮಕ ಸಂಬಂಧವನ್ನು ಆ ಪ್ರದೇಶಗಳ ಜನರು ಹೊಂದಿಲ್ಲ ಎಂಬುದನ್ನು ಗಮನಿಸಬೇಕು.

ಚೆನ್ನೆಮಣೆಯಂಥ ಒಂದು ಜನಪದ ಆಟವನ್ನು ತುಳು ಸಂಸ್ಕೃತಿಗೆ ಸೇರಿದ ಆಟವೆಂಬುದಾಗಿ ಮಾತ್ರ ಪರಿಗಣಿಸುವಂತಿಲ್ಲ. ಇದೇ ಚೆನ್ನೆಮಣೆ ಆಟವು ಕೇರಳ, ತಮಿಳುನಾಡು ಮತ್ತು ಶ್ರೀಲಂಕಾಗಳ ಕೆಲವು ಜನಾಂಗಗಳಲ್ಲಿ ಪ್ರಚಲಿತವಾಗಿದೆ. ಅಲ್ಲದೆ ಕೆಲವು ವಿಚಾರಗಳಲ್ಲಿ ಈ ಆಟವು ತಮಿಳುನಾಡಿನಲ್ಲಿ ಪ್ರದರ್ಶನಗೊಳ್ಳುವ ಸಾಂಸ್ಕೃತಿಕ ಸಂದರ್ಭ ಮತ್ತು ಇತರ ಕಡೆಗಳಲ್ಲಿ ಅವುಗಳಿಗಿರುವ ಸಾಂಸ್ಕೃತಿಕ ಸಂದರ್ಭಗಳಲ್ಲಿ ಸಾಮ್ಯತೆಯಿರುವುದನ್ನು ಗಮನಿಸಬಹುದು. ಮದುವೆಯಂಥ ಸಾಂಸ್ಕೃತಿಕ ಸಂದರ್ಭವನ್ನು ಚೆನ್ನೆಮಣೆ ಆಟ ಹಲವಾರು ಪ್ರದೇಶಗಳಲ್ಲಿ ಪಡೆದಿರುವುದು ಗಮನಾರ್ಹ ಸಂಗತಿಯಾಗಿದೆ

**ಈ. ಚೆನ್ನೆಮನೆಯಾಟದ ವಿಧಗಳು :-**

೧. ಚೆನ್ನೆಯಾಟ

೨. ಪೆರ್ಗ ಅಥವಾ ಬುಲೆಪೆರ್ಗ

೩. ಜೋಡು ಪೆರ್ಗ

೪. ಅರಸಾಟ -I

೫. ಅರಸಾಟ -II

೬. ಮಂತ್ರಿಯಾಟ

೭. ಕೋಡಿಲ್ಲ್ ಕಟ್ಟ

೮. ಎರಟೆ ಕಟ್ಟೆ

೯. ಎರಟೆ ಮುಕ್ಕೆ

೧೦.ಕತ್ತರಿ

೧೧.ಅಜ್ಜಿನಕಾರ್

೧೨.ಮಠ

೧೩. ಎಕ್ಕಡಿ

೧೪. ಸೂಳೆಯಾಟ

೧೫. ಕೊಂಪಲ ಚೆನ್ನೆ

೧೬. ಎಂಚಿಲ್ – ಬಚ್ಚಿಲ್



ಈ ಹದಿನಾರು ಬಗೆಯ ಚೆನ್ನೆಮಣೆ ಆಟಗಳ ಮಾಹಿತಿಗಳನ್ನು ಸಂಗ್ರಹಿಸಿ ವಿವರಿಸಿ ಗಣನಾಥ ಎಕ್ಕಾರ್‌ರವರು ತಮ್ಮ ಜನಪದ ಆಟಗಳು ಮಹಾಪ್ರಬಂಧದಲ್ಲಿ ವಿಶ್ಲೇಷಿಸಿದ್ದಾರೆ. ಇದುವರೆಗೆ ನಡೆದ ಚೆನ್ನೆಯಾಟಗಳ ಕುರಿತಾದ ಅಧ್ಯಯನದಲ್ಲಿ ಚೆನ್ನೆಯಾಟ, ಬುಲೆಪೆರ್ಗ, ಜೋಡುಪೆರ್ಗ, ಅರಸಾಟ, ಸೀತೆಯಾಟ ಮೊದಲಾದ ಕೆಲವು ಆಟಗಳನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ.

**"ಚೆನ್ನೆ" ಶಬ್ದ**

ಚೆನ್ನೆ ಒಂದು ವಿಶಿಷ್ಟವಾದ ಶಬ್ಧವಾಗಿದೆ. ತುಳುವಿನಲ್ಲಿ ದೈನಂದಿನ ವ್ಯವಹಾರಗಳಲ್ಲಿ ಈ ಶಬ್ಧ ಬಳಕೆಯಾಗುವುದಿಲ್ಲ. ವ್ಯಕ್ತಿಗಳ ಹೆಸರುಗಳಲ್ಲಿ 'ಚೆನ್ನ', 'ಚೆನ್ನಿ', 'ಚೆನ್ನಪ್ಪ', 'ಚೆನ್ನಮ್ಮ' ಇತ್ಯಾದಿಗಳು ಕಂಡುಬರುತ್ತವೆ. ಇದರಿಂದ 'ಚೆನ್ನೆ' ಎಂಬ ಹೆಸರಿನ ನಿಷ್ಪತ್ತಿಯನ್ನು ಹುಡುಕಾಡುವುದು ಕಷ್ಟವಾಗುತ್ತದೆ. ಕನ್ನಡದಲ್ಲಿ ಚೆನ್ನ ಮತ್ತು ಚೆನ್ನೆ ಪದಗಳಿಗೆ 'ಸುಂದರ', 'ಸುಂದರಿ', ಎಂಬ ಅರ್ಥಗಳಿವೆ/ ಇದರಿಂದ ಚೆನ್ನೆ ಪದಕ್ಕೆ ಆಟದ ಸ್ವರೂಪದಲ್ಲಿ ನಿಷ್ಪತ್ತಿಯನ್ನು ಸೂಚಿಸುವ ಅಗತ್ಯವಿದೆ. ಪೀಟರ್ ಜೆ. ಕ್ಲಾಸ್ ತಮ್ಮ 'ತುಳುವ – ಪುರಾಣ'ಮತ್ತು ಆರಾಧನಾ ಸಂಪ್ರದಾಯಗಳಲ್ಲಿ ಚೆನ್ನೆ ಎಂಬ ಪ್ರಬಂಧದಲ್ಲಿ ಚೆನ್ನೆ ಶಬ್ಧಕ್ಕೆ 'ಸುಂದರ', 'ಮನೋಹರ', 'ಆಕರ್ಷಕ' ಮೊದಲಾದ ಅರ್ಥಗಳನ್ನು ನೀಡುತ್ತಾರೆ (ಪೀಟರ್ ಜೆ.ಕ್ಲಾಸ್ 1987:203) ಆದರೆ ಈ ಅರ್ಥಗಳು ಆಟದೊಂದಿಗಾಗಲೀ ಮಣೆಯೊಂದಿಗಾಗಲೀ ಯಾವುದೇ ಸಂಬಂಧವನ್ನು ಹೊಂದಿಲ್ಲವೆಂಬುದನ್ನು ಸೂಚಿಸುತ್ತಾರೆ. ಹಿಂದಿನ ಕಾಲದಲ್ಲಿ ಲೋಹದ ಚೆನ್ನೆಮಣೆಗಳು ಬಳಕೆಯಾಗುತ್ತಿದ್ದು, ಅವುಗಳ ಸುಂದರ ಆಕಾರಗಳಿಂದಾಗಿ ಈ ಶಬ್ಧ ಬಂದಿರಬೇಕೆಂದು ಸೂಚಿಸುತ್ತಾರೆ. ಪಾಡ್ದನಗಳಲ್ಲಿ ಬೆಳ್ಳಿಯ ಮಣಿ ಮತ್ತು ಬಂಗಾರದ ಕಾಯಿಗಳ ಉಲ್ಲೇಖಗಳು ಬರುತ್ತವೆ. ಆದರೆ ಆಡುವ ಸಂದರ್ಭಗಳಲ್ಲಿ ಎಲ್ಲೂ ಲೋಹದ ಮಣಿಗಳು ಕಾಣಸಿಗುವುದಿಲ್ಲ. ಅಲ್ಲದೆ ತುಳುವಿನಲ್ಲಿ 'ಚೆನ್ನೆ' ಎಂಬ ಪದವು ಜನಪ್ರಿಯವಾದುದಲ್ಲ. ಚೆನ್ನೆ ಪದಕ್ಕೆ 'ಸುಂದರ', 'ಮನೋಹರ', 'ಆಕರ್ಷಕ' ಈ ಅರ್ಥ ಪ್ರಚಲಿತವಿದೆ. ಈ

ದೃಷ್ಟಿಯಿಂದ ಚೆನ್ನೆ ಎಂಬ ಶಬ್ಧ ದ್ರಾವಿಡ ಮೂಲವಾಗಿದ್ದು ಈ ಹೆಸರು ಬಂದಿರಬಹುದು. ಆಗ ಪೀಟರ್ ಜೆ.ಕ್ಲಾಸ್ ಅವರು ಮಾಡಿರುವ ಊಹೆ ಸರಿಯಾಗುತ್ತಿದೆ.

ತುಳುವಿನಲ್ಲಿ ಚೆನ್ನೆಮಣೆ ಆಟವನ್ನು 'ಚೆನ್ನೆದ ಗೊಬ್ಬು' ಎಂದು ಕರೆಯುತ್ತಾರೆ. 'ಗೊಬ್ಬು' ಎಂಬ ಪದಕ್ಕೆ ಚೆನ್ನೆ ಎಂಬ ಪದವು ನಾಮವಿಶೇಷಣವಾಗಿ ಬಂದಿರುವುದನ್ನು ಗಮನಿಸಬಹುದು. ತುಳುವಿನಲ್ಲಿ 'ಚೆನ್ನ', 'ಚೆನ್ನಿ', 'ಚೆನ್ನಪ್ಪ', 'ಚೆನ್ನಮ್ಮ' ಮೊದಲಾದ ಹೆಸರುಗಳು ಇರುವುದಾದರೂ ಈ ಹೆಸರುಗಳಿಂದ ಚೆನ್ನೆ ಎಂಬ ಹೆಸರು ಈ ಆಟಕ್ಕೆ ಬಂದಿರುವ ಸಾಧ್ಯತೆಗಳಿಲ್ಲ. ಇದನ್ನು ಮೇಲಿನ ನಾಮವಿಶೇಷಣ ಸೂಚಿಸುತ್ತದೆ. ಕಂಬುಲ, ಹುಲಿದನ ಮುಂತಾದ ಆಟಗಳಲ್ಲಿ ಭೂಮಿ ಮತ್ತು ಹೆಣ್ಣನ್ನು ರೂಪಕಾತ್ಮಕವಾಗಿ ಬಳಸಲಾಗಿದೆ. ಚೆನ್ನೆಮಣೆ ಆಟದಲ್ಲೂ ಭೂಮಿ ಮತ್ತು ಹೆಣ್ಣನ್ನು ರೂಪಕಾತ್ಮಕವಾಗಿ ಬಳಸಿದಂತೆ ತೋರುತ್ತದೆ. ಈ ಆಟದ ಕುರಿತಾಗಿ ಇರುವ ಐತಿಹ್ಯಗಳು ಹೆಣ್ಣು ಮಕ್ಕಳ ಕುರಿತಾಗಿವೆ. ಇದರಿಂದ ಚೆನ್ನೆ ಎಂಬ ಶಬ್ಧವು 'ಸುಂದರಿ' ಎಂಬ ಅರ್ಥದಲ್ಲಿ ಹೆಣ್ಣನ್ನು ಸಂಕೇತಿಸುತ್ತದೆ. ಚೆನ್ನೆಮಣೆ ಆಟದ ವಿಧಗಳಲ್ಲಿ ಬಹುಜನಪ್ರಿಯವಾದ ಆಟ 'ಚೆನ್ನೆ' ಎಂಬ ಹೆಸರಿನ ಆಟವಾಗಿದೆ. ಇದರಿಂದ ಆರಂಭದಲ್ಲಿ ಚೆನ್ನೆ ಪ್ರಕಾರವು ಹುಟ್ಟಿ ಬಳಿಕ ಉಳಿದ ಆಟಗಳು ವಿಕಾಸಗೊಂಡಿರಬೇಕು. ಇದರಿಂದ ಬೇರೆ ಆಟಗಳಿಗೆ ಸ್ವತಂತ್ರವಾದ ಹೆಸರುಗಳಿದ್ದರೂ ವ್ಯಾಪಕವಾಗಿ ಚೆನ್ನೆ ಆಟ ಎಂದು ಕರೆದಿರುವ ಸಾಧ್ಯತೆಗಳಿವೆ.

**"ಮಣೆ"**

'ಮಣೆ' ಎಂಬುದು ತುಳುವರು ನೆಲದ ಮೇಲೆ ಊಟಕ್ಕೆ ಕುಳಿತುಕೊಳ್ಳುವಾಗ ಕುಳಿತುಕೊಳ್ಳಲು ಉಪಯೋಗಿಸುವ ಮರದ ಸಾಧನವಾಗಿದೆ. ಈ ಮಣೆಯ ಆಕಾರವನ್ನೇ ಚೆನ್ನೆಮಣೆಯು ಹೋಲುವುದರಿಂದ ಚೆನ್ನೆ ಆಟವಾಡುವ ಮರದ ಉಪಕರಣವನ್ನು ಚೆನ್ನೆ ಮಣೆಯೆಂದೇ ಕರೆಯಲಾಗಿದೆ. ಚೆನ್ನೆ ಆಟದ ಮಣೆಯನ್ನು ವಿವಿಧ ವಿನ್ಯಾಸಗಳಲ್ಲಿ ಬೆಲೆಬಾಳುವ ಮರಗಳಿಂದ ತಯಾರಿಸಲಾಗುತ್ತದೆ. ಚೆನ್ನೆಮಣೆಯನ್ನು ತಯಾರಿಸುವಲ್ಲಿ ನಿರ್ದಿಷ್ಟ ಅಳತೆಗಳಲ್ಲಿ ನಿಯಮವಿಲ್ಲ. ಸಣ್ಣ ಆಕೃತಿಯ ಮಣೆಯಿಂದ ಹಿಡಿದು ದೊಡ್ಡ ಮಣೆಗಳು ಇವೆ. ಮಣೆಯ ಮೇಲ್ಭಾಗದಲ್ಲಿ ನಾಲ್ಕು ಬದಿಗಳಲ್ಲಿ ಮತ್ತು ಹಿಂಭಾಗದಲ್ಲಿ ವಿವಿಧ ವಿನ್ಯಾಸಗಳ ಕೆತ್ತನೆಗಳು ಇರುತ್ತವೆ. ಈ ರೀತಿಯ ಕೆತ್ತನೆಗಳಿಲ್ಲದ ಸರಳ ರೂಪದ ಮಣೆಗಳು ಇವೆ. ಕೆಲವು ಮಣೆಗಳ ಅಡಿಭಾಗದಲ್ಲಿ ನಾಗರಹಾವಿನ ವಿನ್ಯಾಸವನ್ನು ಕೆತ್ತಲಾಗಿದೆ. ಕೆಲವು ವಕ್ತೃಗಳ ಹೇಳಿಕೆಯ ಪ್ರಕಾರ ಚೆನ್ನೆಮಣೆಯ ಹಿಂಭಾಗದಲ್ಲಿ ನಾಗರಹಾವಿನ ವಿನ್ಯಾಸ ಕಡ್ಡಾಯವಾಗಿ ಇರಬೇಕು. ಏಕೆಂದರೆ ಚೆನ್ನೆಮಣೆ ನಾಗಬೆರ್ಮೆರಿಗೆ ಸಂಬಂಧಿಸಿದಂತೆ ಆಟವಾಗಿದೆ ಎಂದು ಅವರು ಕೊಡುವ ಕಾರಣವಾಗಿದೆ.

ಒಂದು ಚೆನ್ನೆಮಣೆಯಲ್ಲಿ ವೃತ್ತಾಕಾರವನ್ನು ಹೊಂದಿರುವ ಹದಿನಾಲ್ಕು ಹೊಂಡಗಳಿವೆ. ಇದನ್ನು ಕೋಣೆ ಎಂದು ಕರೆಯುತ್ತಾರೆ. ಈ ಹದಿನಾಲ್ಕು ಕೋಣೆಗಳು ಏಳು ಕೋಣೆಗಳಂತೆ ಎರಡು ಸಾಲುಗಳಲ್ಲಿ ಎದುರುಬದುರಾಗಿದೆ. ಮಣೆಯ ಎಡ ಮತ್ತು ಬಲಭಾಗಗಳಲ್ಲಿ ಕಾಯಿಗಳನ್ನು ಸಂಗ್ರಹಿಸಲು ಆಯತಾಕಾರದ ಕೋಣೆಗಳಿವೆ. ಚೆನ್ನೆಮಣೆ ಇಲ್ಲದೆಯೂ ನೆಲದ ಮೇಲೆ ಚೆನ್ನೆಮಣೆಗಳಲ್ಲಿರುವಂತೆಯೇ ಕೋಣೆಗಳನ್ನು ನಿರ್ಮಿಸಿ ಈ

ಆಟಗಳನ್ನು ಆಡುತ್ತಾರೆ. ಸಾಮಾನ್ಯವಾಗಿ ದೇವಸ್ಥಾನ ಮತ್ತು ಗುಡ್ಡಗಳಲ್ಲಿ ಈ ರೀತಿಯ ಚೆನ್ನೆ ಆಟದ ರಚನೆಗಳು ಕಂಡುಬರುತ್ತವೆ.

**ಚೆನ್ನೆಯ ಕಾಯಿಗಳು**

ಚೆನ್ನೆಮಣೆ ಆಟದಲ್ಲಿ ಬಳಸುವ ಕಾಯಿಗಳನ್ನು 'ಪರೆಲ್' (ಹರಳು) ಎಂದು ಕರೆಯುತ್ತಾರೆ. 'ಚೆನ್ನೆದ ಕಾಯಿ', 'ಬಿತ್ತ್' ಎಂದೂ ಕರೆಯುತ್ತಾರೆ. 'ಕಾಯಿ' ಎಂಬ ಪದವೇ ಹೆಚ್ಚಾಗಿ ಬಳಕೆಯಲ್ಲಿದೆ. ಕಾಯಿ ಪಡೆಯುವ ಕ್ರಿಯೆಯನ್ನು 'ಪಂದ್‌ರ್ಪಿನಿ' (ಹಣ್ಣಾಗುವುದು) ಎಂದು ಕರೆಯುವುದರಿಂದ ಕಾಯಿ ಎಂಬ ಪದದ ಬಳಕೆ ಸೂಕ್ತವೆನಿಸುತ್ತದೆ. ಒಂದು ಕೋಣೆಗೆ ಹದಿನಾಲ್ಕು ಕಾಯಿಗಳಂತೆ ಐವತ್ತಾರು ಕಾಯಿಗಳನ್ನು ಆಟದಲ್ಲಿ ಬಳಸುತ್ತಾರೆ.

ಮಂಜೊಟ್ಟಿ ಎಂಬ ಮರದ ಕೆಂಪು ಬಣ್ಣದ ಮಂಜೊಟ್ಟಿ ಕಾಯಿಗಳನ್ನು ಹೆಚ್ಚಾಗಿ ಈ ಆಟದಲ್ಲಿ ಬಳಸುತ್ತಾರೆ. 'ಹೊಂಗಾರೆ', (ತುಳು: ಪೊಂಗಾರು) ಮರದ ಕಾಯಿಗಳನ್ನು ಬಳಸುವುದೂ ಇದೆ. ಇವು ಗಾತ್ರದಲ್ಲಿ ಮಂಜೊಟ್ಟಿಗಿಂತ ಮೂರರಷ್ಟು ದೊಡ್ಡದಾಗಿವೆ. ಕೆಲವೊಮ್ಮೆ ಸಣ್ಣ ಗಾತ್ರದ ಕವಡೆ ಚಿಪ್ಪುಗಳನ್ನು ಬಳಸಿ ಆಡುತ್ತಾರೆ. 'ಎಕ್ಕಡಿ' ಎಂಬ ಪ್ರಕಾರದ ಆಟಕ್ಕೆ ಈ ರೀತಿಯ ಸಣ್ಣ ಗಾತ್ರದ ಕವಡೆ ಚಿಪ್ಪುಗಳೇ ಬೇಕಾಗುತ್ತವೆ. ಸೌಲಭ್ಯದ ದೃಷ್ಟಿಯಿಂದ ಮಂಜೊಟ್ರಿ ಕಾಯಿಯೇ ಆಟಕ್ಕೆ ಹೆಚ್ಚು ಸುಲಭವಾಗುತ್ತದೆ. ಕೆಲವೊಮ್ಮೆ ಚಿಕ್ಕ ಕಲ್ಲುಗಳು, ಬಳೆ ಚೂರುಗಳನ್ನು ಬಳಸಿ ಆಡುವುದೂ ಇದೆ.

**ಇತರ ಪಾರಿಭಾಷಿಕ ಶಬ್ದಗಳು** :-

ಚೆನ್ನೆಮಣೆಯ ಹೊಂಡಗಳನ್ನು 'ಇಲ್ಲ್' (ಮನೆ), 'ಕೋಣೆ', 'ಗುಡಿ' (ಹೊಂಡ) ಎಂದು ಕರೆಯುತ್ತಾರೆ. ಕೆಲವು ಪ್ರದರ್ಶನಗಳಲ್ಲಿ 'ಪುಡಾಯಿ' ಎಂಬ ಶಬ್ದವನ್ನು ಬಳಸಲಾಗಿದೆ. ಹೆಚ್ಚಾಗಿ ಕೋಣೆ ಎಂಬ ಶಬ್ದವನ್ನೇ ಬಳಸುತ್ತಾರೆ. ನಿರ್ದಿಷ್ಟ ಸಂಖ್ಯೆಯ ತಾಯಿಗಳನ್ನು ನಿರ್ದಿಷ್ಟ ಹೆಸರಿನಿಂದ ಕರೆಯಲಾಗುತ್ತದೆ.

ಒಂದು ಕಾಯಿ = ವರ್ತೆ

ಎರಡು ಕಾಯಿ = ಜತೆ

ಮೂರು ಕಾಯಿ = ಮೂರ್ತೆ

ನಾಲ್ಕು ಕಾಯಿ = ವನಸ್ (ಊಟ) ಅಥವಾ ಬುಲೆ (ಬೆಳೆ)

ನಾಲ್ಕಕ್ಕಿಂತ ಹೆಚ್ಚು ಕಾಯಿಗಳಿದ್ದರೆ 'ಪೆರ್ಗ' ಎಂದು ಕರೆಯಲಾಗುತ್ತದೆ. 'ಎಕ್ಕಡಿ' ಎಂಬ ಪ್ರಕಾರದ ಆಟದಲ್ಲಿ ಇದಕ್ಕೆ ಬೇರೆಯೇ ಹೆಸರುಗಳಿವೆ. ಆದರೆ ಮೇಲಿನ ಪಾರಿಭಾಷಿಕ ಶಬ್ದಗಳು ಎಲ್ಲಾ ಆಟಗಳಲ್ಲಿದ್ದರೂ ಎಲ್ಲಾ ಆಟಗಾರರು ಕಡ್ಡಾಯವಾಗಿ ಬಳಸುವುದಿಲ್ಲ. ಸಾಮಾನ್ಯವಾಗಿ ಹಿರಿಯ ತಲೆಮಾರಿನ ಆಟಗಾರರು ಇದನ್ನು ಬಳಸುತ್ತಾರೆ. ಮಣೆಗೆ ಕಾಯಿಗಳನ್ನು ಹಾಕುತ್ತಾ ಹೋಗಿ ಮುಂದೆ ಹಾಕಲು ಕಾಯಿಗಳಿಲ್ಲದ ಕೋಣೆ ಎದುರಾಗಿ ಆಟ

ಮುಂದುವರಿಸಲು ಸಾಧ್ಯವಾಗದಿದ್ದರೆ ಈ ಕ್ರಿಯೆಯನ್ನು "ಜೆಪ್ಪುನು" (ನಿದ್ರೆಮಾಡು) ಎಂದು ಕರೆಯಲಾಗುತ್ತದೆ. ಚೆನ್ನೆ ಆಟದಲ್ಲಿ ಸೋಲುವುದನ್ನು "ಪೊರಿ ಆಪುನಿ" (ಹೊದಲು ಆಗುವುದು), "ಗಟ್ಟಿಮಿತರುನಿ" (ಘಟ್ಟಹತ್ತುವುದು), "ಮದ್ಮೆ ಆಪುನಿ", (ಮದುವೆ ಆಗುವುದು) ಎಂದು ಹೇಳುತ್ತಾರೆ. ಕಾಯಿ ತುಂಬಿಸಲಾರದ ಖಾಲಿ ಕೋಣೆಗಳಿದ್ದರೆ ಅದನ್ನು "ಪೊತ್ತು" (ಸುಟ್ಟಿರುವುದು) ಎಂದು ಕರೆಯಲಾಗುತ್ತದೆ.

ಈ ಮೇಲಿನವುಗಳು ಸಾಮಾನ್ಯವಾಗಿ ಎಲ್ಲಾ ವಿಧದ ಆಟಗಳಲ್ಲಿ ಬಳಸುವ ಪಾರಿಭಾಷಿಕ ಶಬ್ಧಗಳಾಗಿವೆ. ಕೆಲವು ವಿಧಗಳಿಗೆ ಅವುಗಳದೇ ಆದ ವಿಶೇಷ ಪಾರಿಭಾಷಿಕ ಪದಗಳಿವೆ. ಇವುಗಳನ್ನು ಮುಂದೆ ಆ ಆಟಗಳ ವಿವರಣೆಯ ಸಂದರ್ಭದಲ್ಲಿ ಗಮನಿಸಬಹುದಾಗಿದೆ.

ಉ. <u>ಚೆನ್ನೆಮಣೆ ಆಟದ ವಿಶ್ಲೇಷಣೆ</u>

"ಮಂಕಲ" ಎಂಬ ಹೆಸರಿನಿಂದ ವಿಶ್ವದ ಹಲವು ರಾಷ್ಟ್ರಗಳಲ್ಲಿ ಈ ಆಟವು ಪ್ರಚಲಿತವಿದೆ. ಆಟದ ಸ್ವರೂಪದಲ್ಲಿ ಭಿನ್ನತೆ ಮತ್ತು ಸಾಮ್ಯತೆಗಳಿರುವುದನ್ನು ಈಗಾಗಲೇ ವಿದ್ವಾಂಸರು ಗುರುತಿಸಿದ್ದಾರೆ. ........ ಆಫ್ರಿಕಾ, ದಕ್ಷಿಣ ಭಾರತ, ಇಂಡೋನೇಶಿಯಾ, ಸಂಸ್ಕೃತಿ ಕ್ಷೇತ್ರಗಳು ಪ್ರಾಚೀನ ಕಾಲದಲ್ಲಿ ಒಂದೇ ವಾಣಿಜ್ಯ ಮಾರ್ಗದಲ್ಲಿದ್ದವು ಎಂಬುದು ಚಾರಿತ್ರಿಕ ಸತ್ಯ. ಇವೆರಡೂ ಸತ್ಯಾಂಶಗಳು ಮಂಕಲವು ಮಧ್ಯ ಪ್ರಾಚ್ಯದಲ್ಲಿ ಹುಟ್ಟಿ ಕ್ರಿಸ್ತಪೂರ್ವದಲಲಿಯೇ ವಾಣಿಜ್ಯ ಜಲಮಾರ್ಗದ ಮೂಲಕ ಈ ಕ್ಷೇತ್ರಗಳಿಗೆ ಪಯಣಿಸುತ್ತಿತ್ತು ಎಂಬುದನ್ನು ಸೂಚಿಸುತ್ತದೆ. (ಕ್ಲಾಸ್ 1982 : 243) ಎಂದು ಈ ಆಟದ ಪ್ರಸರಣವನ್ನು ಗುರುತಿಸಿದ್ದಾರೆ. ಆ ಆಟವು ತಮಿಳುನಾಡಿನಂಥ ಭಾರತೀಯ ರಾಜ್ಯಗಳಲ್ಲೂ ಆಚರಣಾತ್ಮಕ ಸಂಬಂಧವನ್ನು ಹೊಂದಿ ಸಾಂಸ್ಕೃತಿಕ ಮಹತ್ವವನ್ನು ಪಡೆದಿರುವುದು ಅಧ್ಯಯನಗಳಿಂದ ತಿಳಿದುಬರುತ್ತದೆ. ಆದರೆ ಒಂದು ಸಂಸ್ಕೃತಿ ಪ್ರದೇಶದಲ್ಲಿ ಒಂದು ಆಟವು ಅದರದ್ದೇ ಆದ ವಿಶಿಷ್ಟ ಅರ್ಥ ಮತ್ತು ಕಾಯಿಗಳನ್ನು ಹೊಂದಿರುತ್ತದೆ. ಈ ದೃಷ್ಟಿಯಿಂದ ತುಳುನಾಡಿನಲ್ಲಿ ಚೆನ್ನೆಮಣೆ ಆಟವು ಹೊಂದಿರುವ ಸಾಂಸ್ಕೃತಿಕ ಮಹತ್ವವನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ತುಳುನಾಡಿನ ಸಂಸ್ಕೃತಿಯಲ್ಲಿ ಅದರ ಅರ್ಥ ಮತ್ತು ಕಾರ್ಯವನ್ನು ವಿವರಿಸಲಾಗಿದೆ. ಜನಪದ ಆಟಗಳು ವ್ಯಕ್ತಿಗೆ ಸಂಸ್ಕೃತಿಯನ್ನು ಕಲಿಸುವ ಪ್ರಬಲ ಮಾಧ್ಯಮಗಳು ಎನ್ನುವ ರಾಚನಿಕ ವಿಶ್ಲೇಷಣೆಯ ಅಂಶಗಳನ್ನು ಚೆನ್ನೆಮಣೆ ಆಟವು ಸಮರ್ಥಿಸುತ್ತದೆ. ಈ ಆಟದ ಮೇಲ್ಪದರದ ರಚನೆಯಲ್ಲಿ ಮನೋರಂಜನೆ ಸಮಯ ಕಳೆಯುವಿಕೆ, ಸ್ಪರ್ಧೆ, ಆಚರಣೆ ಇತ್ಯಾದಿಗಳು ಕಂಡುಬಂದರೆ ಆಳದ ರಚೆನಯಲ್ಲಿ ಸಾಮಾಜಿಕ , ರಾಜಕೀಯ ಮತ್ತು ಧಾರ್ಮಿಕ ಕ್ರಿಯೆಗಳಿಗೆ ವ್ಯಕ್ತಿಯನ್ನು ಸಿದ್ಧಗೊಳಿಸುವ ಶಕ್ತಿ ಇರುವುದು ಕಂಡುಬರುತ್ತದೆ. ಈ ದೃಷ್ಟಿಯಿಂದ ಚೆನ್ನೆಮಣೆ ಅಟದ ವಿಧಗಳನ್ನು ಈ ಕೆಳಗಿನಂತೆ ವಿಂಗಡಿಸಿ ವಿಶ್ಲೇಷಣೆ ನಡೆಸಲಾಗಿದೆ.

೧. ತುಳುನಾಡಿನ ಕೃಷಿ ಮತ್ತು ಚೆನ್ನೆಮಣೆ ಆಟ.

೨. ತುಳುನಾಡಿನ ರಾಜಕೀಯ ವ್ಯವಸ್ಥೆ ಮತ್ತು ಚೆನ್ನೆಮಣೆ ಆಟ

೩. ತುಳುನಾಡಿನ ಧಾರ್ಮಿಕ ಆಚರಣೆಗಳಲ್ಲಿ ಚೆನ್ನೆಮಣೆ ಆಟ

೪. ಚೆನ್ನೆಮಣೆ ಆಟದಲ್ಲಿ ವ್ಯಕ್ತವಾಗುವ ಇತರ ಅಂಶಗಳು

**ಊ.ತುಳುನಾಡಿನ ಕೃಷಿ ಸಂಸ್ಕೃತಿ ಮತ್ತು ಚೆನ್ನೆಮಣೆ ಆಟ :-**

ತುಳುನಾಡಿನಲ್ಲಿ ಕೃಷಿ ಸಂಸ್ಕೃತಿಗೆ ಪ್ರಧಾನ ಸ್ಥಾನವಿದೆ. ಆರ್ಥಿಕ ಉತ್ಪಾದನೆಯ ಮುಖ್ಯ ಕಸುಬು ಇದಾಗಿರುವುದರಿಂದ ಕೃಷಿ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಪಡೆದಿದೆ. ಕೃಷಿಗೆ ಸಂಬಂಧಿಸಿದ ಹಲವಾರು ನಂಬಿಕೆ ಮತ್ತು ಆಚರಣೆಗಳು ತುಳುನಾಡಿನಲ್ಲಿ ವ್ಯಾಪಕವಾಗಿವೆ. ತೆನೆ ಹಾಕುವುದು, ಆಟಿ ಅಮಾವಸ್ಯೆಯ ಆಚರಣೆಗಳು, ದೀಪಾವಳಿ ಹಬ್ಬದ ಆಚರಣೆಗಳು ಮುಂತಾದವುಗಳಲ್ಲಿ ಇದನ್ನು ಗಮನಿಸಬಹುದಾಗಿದೆ. ಮೀನು ಹಿಡಿಯುವುದು, ಶೇಂದಿ ತೆಗೆಯುವುದು, ವ್ಯಾಪಾರ ಇತ್ಯಾದಿಗಳು ತುಳುನಾಡಿನ ಉಪಕಸುಬುಗಳಾಗಿದ್ದರೂ, ಕೃಷಿಗಿರುವಷ್ಟು ಸಾಂಸ್ಕೃತಿಕ ಹಿನ್ನೆಲೆ ಇವುಗಳಿಗೆ ಇಲ್ಲ. ತುಳುನಾಡಿನಲ್ಲಿ ಕೃಷಿ ಸಂಸ್ಕೃತಿ ಬದುಕಿನ ಮೂಲವಾಗಿರುವುದರಿಂದ ಸಾಂಸ್ಕೃತಿಕ ಮಹತ್ವ ಬಂದಿದೆ. ಪ್ರಾಕೃತಿಕವಾಗಿ ಬೆಳೆಯುವ ಧಾನ್ಯಗಳು ವ್ಯವಸ್ಥಿತವಾಗಿ ಬೆಳೆಸುವುದು. ಸಂಸ್ಕೃತಿಗಳಲ್ಲಿ ಕಂಡುಬರುತ್ತದೆ. ಇದರಿಂದ ಕೃಷಿ ವ್ಯವಸ್ಥೆ ಮನುಷ್ಯ ನಿರ್ಮಿಸಿಕೊಂಡ ಸಾಂಸ್ಕೃತಿಕ ವ್ಯವಸ್ಥೆಯೇ ಆಗಿದೆ. ಇದು ಮನುಷ್ಯನ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವುದರಿಂದ ಅದಕ್ಕೆ ಸಾಂಸ್ಕೃತಿಕ ರೂಪವನ್ನು ನೀಡಲಾಗಿದೆ. ಗದ್ದೆಯ ರಚನೆ, ಉಳುವಿಕೆಯ ವಿವಿಧ ಹಂತಗಳು, ಕಂಬುಲ, ನೇಜಿ ಹಾಕುವುದು, ನಾಟಿ ಮಾಡುವುದು, ಕೊಯ್ಲು ತೆನೆ ಹಾಕುವುದು ವಿವಿಧ ಆಚರಣೆಗಳು ಇವೆಲ್ಲವೂ ಸಾಂಸ್ಕೃತಿಕ ರೂಪಗಳೇ ಆಗಿವೆ. ಕೃಷಿಯು ಆರ್ಥಿಕ ಉತ್ಪಾದನೆಯ ಮೂಲವಾಗಿರುವುದರಿಂದ ಈ ರೀತಿಯ ಸಾಂಸ್ಕೃತಿಕರಣದ ವ್ಯವಸ್ಥೆ ಅಗತ್ಯವಾಗಿದೆ. ಅಲ್ಲದೆ ವ್ಯಕ್ತಿಯನ್ನು ಈ ಸಂಸ್ಕೃತಿಗೆ ಒಳಪಡಿಸುವುದು ಬಹುಮುಖ್ಯವಾಗಿರುವುದರಿಂದ ಆಚರಣೆಗಳು ಮತ್ತು ಚೆನ್ನಮಣೆ ಆಟದಂಥ ಮಾಧ್ಯಮಗಳನ್ನು ಸೃಷ್ಟಿಸಲಾಗಿದೆ. ಚೆನ್ನೆ ಆಟ, ಪೆರ್ಗ, ಜೋಡು ಪೆರ್ಗ ಇತ್ಯಾದಿ ಆಟಗಳ ಮೂಲಕ ಇದನ್ನು ವಿವರಿಸಬಹುದಾಗಿದೆ. ಅರಸಾಟ, ಮಂತ್ರಿಯಾಟಗಳಲ್ಲೂ ಕೃಷಿ ವ್ಯವಸ್ಥೆಯ ಅಂಶಗಳಿವೆ.

ಪಾರಿಭಾಷಿಕ ಶಬ್ದ ಮತ್ತು ಆಟದ ಚಟುವಟಿಕೆಗಳು ಇದನ್ನು ಸೂಚಿಸುತ್ತಿವೆ. 'ಕಪ್ಪಲ್' ಎಂದರೆ ತುಳುವಿನಲ್ಲಿ ಹಡಗು ಎಂದರ್ಥ. ಪ್ರಾಚೀನ ತುಳುನಾಡಿನಲ್ಲಿ ಈ ಮೂಲಕ ವ್ಯಾಪಾರಗಳು ನಡೆಯುತ್ತಿದ್ದವು. ತುಳು ಜನಪದ ಈ ಕಥೆಗಳಲ್ಲಿ ವ್ಯಾಪಾರಕ್ಕೆ ಸಂಬಂಧಿಸಿದಂತೆ ನೂರಾರು ಕಥೆಗಳಿದ್ದು ಹಡಗುಗಳು ಈ ಕಥೆಗಳಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. 'ಕಪ್ಪಲ್ ಮುರ್ಕುನು' (ಹಡಗು ಮುಳುಗುವುದು) ಎಂಬ ಪದ ತುಳುವಿನಲ್ಲಿ ವಿಶಿಷ್ಟ ಅರ್ಥವನ್ನು ಹೊಂದಿದೆ. ಅಂದರೆ ನಷ್ಟವಾಗುವುದು, ಎಲ್ಲಾ ಕಳೆದುಕೊಳ್ಳುವುದು ಎಂಬ ಅರ್ಥಗಳನ್ನು ಹೊಂದಿದೆ. ಹಿಂದೆ ವ್ಯಾಪಾರಕ್ಕಾಗಿ ಹೋದ ಹಡಗುಗಳು ಮುಳುಗಿ ಎಲ್ಲವನ್ನು ಕಳೆದುಕೊಂಡು ಅನಾಥರಾದ ಉದಾಹರಣೆಗಳು ಐತಿಹ್ಯ ಮತ್ತು ಕಥೆಗಳಲ್ಲಿ ದೊರೆಯುತ್ತದೆ. ಹೀಗೆ ಹಡಗು ವ್ಯಾಪಾರದ ಮುಖ್ಯ ಮಾಧ್ಯಮವಾಗುತ್ತಿತ್ತು.

'ಕಪ್ಪಲ್' ಅಥವಾ 'ಬೊಲ್ಲೆ' ಹಾಕುವ ಮೂಲಕ ಆಟಗಾರನು ಕಾಯಿಗಳನ್ನು ಪಡೆಯುತ್ತಾ ಹೋಗುತ್ತಾನೆ. ಉಳಿದ ಆಟಗಳಲ್ಲಿ ಚೆನ್ನೆಮಣೆಯಲ್ಲಿದ್ದ ಕಾಯಿಗಳನ್ನು ಪಡೆಯುವುದಾಗಿದ್ದರೆ ಈ ಆಟದಲ್ಲಿ ಹೊರಗಿನಿಂದ ಕಾಯಿಗಳನ್ನು ಪಡೆಯುವುದಾಗಿದೆ. ಕೃಷಿಯಿಂದ ಭೂಮಿಯಲ್ಲೇ ಧಾನ್ಯವನ್ನು ಬೆಳೆಸುವುದಾದರೆ, ವ್ಯಾಪಾರದಿಂದ

ಪರದೇಶಕ್ಕೆ ಹೋಗಿ ಹಣ, ವಸ್ತುಗಳನ್ನು ಪಡೆಯಬೇಕಾಗುತ್ತದೆ. ಸ್ವರೂಪದಲ್ಲಿ ಆಗಿರುವ ವ್ಯತ್ಯಾಸಕ್ಕೆ ಮುಖ್ಯ ಕಾರಣಗಳಿವೆ. ಆಟಗಾರನು 'ಕಪ್ಪಲ್' ಮತ್ತು 'ಬೊಲ್ಲೆ'ಗಳನ್ನು ಪಡೆಯುತ್ತಾ ಹೋಗುತ್ತಾನೋ ಅಷ್ಟು ಕಾಯಿಗಳನ್ನು ಪಡೆಯಿತ್ತಾ ಹೋಗುತ್ತಾನೆ. ಕೃಷಿ ಪ್ರಧಾನವಾಗಿರುವ ಆಟಗಳಲ್ಲಿರುವ ಸಿಕ್ಕ ಜಾಣ್ಮೆಗಳಿಗಿಂತ ಭಿನ್ನ ತಂತ್ರಗಳು ಇಲ್ಲಿ ಬೇಕಾಗುತ್ತದೆ. 'ಕಪ್ಪಲ್' ಅಥವಾ ಬೊಲ್ಲೆಗಳನ್ನು ಪಡೆಯುವುದು ಯಾವುದೇ ತಂತ್ರಕ್ಕಿಂತಲೂ ಅದೃಷ್ಟವನ್ನೇ ಅವಲಂಭಿಸಿದೆ ಎಂಬ ನಂಬಿಕೆಯು ಇದಕ್ಕೆ ಕಾರಣವಾಗಿದೆ. ಹೀಗೆ ಎಕ್ಕಾಡಿಯಾಟವು ವ್ಯಾಪಾರ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ವ್ಯಕ್ತಿಯನ್ನು ವ್ಯಾಪಾರ ಸಂಸ್ಕೃತಿಗೆ ಸಿದ್ಧಗೊಳಿಸುವ ಶಕ್ತಿ ಈ ಉಕ್ಕಿರುವುದು ಆಟದ ವಿಶ್ಲೇಷಣೆಯಿಂದ ತಿಳಿಯುತ್ತದೆ.

ಹೀಗೆ ಚೆನ್ನೆಮಣೆ ಆಟದ ಇತರ ಪ್ರಕಾರಗಳು ಕೂಡ ಕೃಷಿ ಸಂಸ್ಕೃತಿ ವ್ಯಾಪಾರ ಸಂಸ್ಕೃತಿಯ ರೂಪಕವಾಗಿಗಳಾಗಿವೆ. ಇದರೊಂದಿಗೆ ಮನೋರಂಜನೆಯ ಪ್ರಮುಖ ಮಾಧ್ಯಮಗಳಾಗಿವೆ.

## ಋ. ಚೆನ್ನೆಮಣೆಯಾಟದ ಆಚರಣಾತ್ಮಕ ಮತ್ತು ಸಾಮಾಜಿಕ ಸಂಬಂಧಗಳು :-

ಚೆನ್ನೆಮಣೆ ಆಟವು ಆಚರಣಾತ್ಮಕ ಸಂಬಂಧಗಳನ್ನು ಹೊಂದಿವೆ. ಹಲವಾರು ಧಾರ್ಮಿಕ ಸಂಬಂಧಿ ಆಚರಣಾತ್ಮಕ ಅಂಶಗಳು ಈ ಆಟದ ಸುತ್ತ ಇರುವುದನ್ನು ಗಮನಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಚೆನ್ನೆಮಣೆಯನ್ನು ವಿಶ್ಲೇಷಿಸುವುದು ಆಟದ ಅರ್ಥ ಮತ್ತು ಕಾರ್ಯವನ್ನು ಅರ್ಥಮಾಡಿಕೊಳ್ಳುವ ದೃಷ್ಟಿಯಿಂದ ಮುಖ್ಯವಾಗುತ್ತದೆ. ಈ ಕೆಳಗಿನ ಅಂಶಗಳೊಂದಿಗೆ ಚೆನ್ನೆಮಣೆ ಆಟವು ಅಚರಣಾತ್ಮಕ ಸಂಬಂಧಗಳನ್ನು ಹೊಂದಿದೆ.

1. ಆಡುವ ಕಾಲದ ಕುರಿತಾದ ನಂಬಿಕೆಗಳು
2. ಆಟದ ಕುರಿತಾಗಿ ಇರುವ ಐತಿಹ್ಯಗಳು, ಧಾರ್ಮಿಕ ಆಚರಣೆಯಲ್ಲಿ ಆಟದ ಬಳಕೆ ಮತ್ತು ಆಟದ ಕುರಿತಾಗಿರುವ ನಿಷೇಧಗಳು.

ಈ ಮೇಲಿನ ವಿಚಾರಗಳ ಸುತ್ತ ಆಟದ ವಿಚಾರಣಾತ್ಮಕ ಅಂಶಗಳು ಹಬ್ಬಿವೆ. ಇವುಗಳನ್ನು ವಿಶ್ಲೇಷಿಸಿದರೆ ಆಟವು ಹೊದಿರುವ ಆಚರಣಾತ್ಮಕ ಸಂಬಂಧದ ಅರ್ಥ ಮತ್ತು ಉದ್ದೇಶಗಳನ್ನು ತಿಳಿಯಬಹುದಾಗಿದೆ.

### ಎ. ಆಡುವ ಕಾಲದ ಕುರಿತಾದ ನಂಬಿಕೆಗಳು

ಚೆನ್ನೆಮಣೆ ಆಟವನ್ನು ನಿರ್ದಿಷ್ಟ ಕಾಲದಲ್ಲಿ ಮಾತ್ರ ಆಡಬೇಕೆಂಬ ನಿಯಮವಿದೆ. ಈ ರೀತಿಯ ನಂಬಿಕೆಗಳಲ್ಲಿ ಪ್ರದೇಶದಿಂದ ಪ್ರದೇಶಗಳಿಗೆ ವ್ಯತ್ಯಾಸವಿರುವುದನ್ನು ಗಮನಿಸಬಹುದು. ಆದರೆ ಈ ವ್ಯತ್ಯಾಸಗಳು ಒಂದೇ ರೀತಿಯವುಗಳಲ್ಲವಾದರೂ ಹೆಚ್ಚು ಕಡಿಮೆ ಒಂದೇ ರೀತಿಯ ಕಾಲದ ಮಿತಿಯಲ್ಲಿ ಬರುತ್ತವೆ. ತುಳುನಾಡಿನ ಬೇರೆ ಜನಪದ ಆಟಗಳಿಗೆ ಈ ರೀತಿಯ ಕಾಲದ ಮಿತಿಗಳಿಲ್ಲ. ಮನೋರಂಜನೆಗಾಗಿ ಚೆನ್ನೆಮಣೆಯನ್ನು ಆಡುವ ಸಂದರ್ಭಗಳಲ್ಲೂ ಈ ರೀತಿಯ ಕಾಲದ ನಂಬಿಕೆಗಳನ್ನು ಕಡ್ಡಾಯವಾಗಿ ಪಾಲಿಸುತ್ತಾರೆ. ಈ ಆಟವನ್ನು ಆಡುವ ಕಾಲದ ಕುರಿತಾಗಿರುವ ನಂಬಿಕೆಗಳನ್ನು ಹೀಗೆ ಸಂಗ್ರಹಿಸಬಹುದು.

೧. ಈ ಆಟವನ್ನು ಆಟಿ (ಆಷಾಡ ಜುಲೈ – ಆಗಸ್ಟ್) ತಿಂಗಳಲ್ಲಿ ಮಾತ್ರ ಆಡಬೇಕು.

೨. ಆಟಿ ತಿಂಗಳು ಆರಂಭವಾಗುವ ದಿನ ಮಣೆಯನ್ನು ಅಟ್ಟ (ಮಾಳಗೆ)ಯಿಂದ ತೆಗೆಯಬೇಕು

೩. ಆಟಿ ಹೊರಗೆ ಹಾಕುವ ದಿನ ಅಂದರೆ ಆಟಿ ತಿಂಗಳು ಮುಗಿದು ಶ್ರಾವಣದ ಮೊದಲ ದಿನ ಮಣೆಯನ್ನು ತೊಳೆದು ಅಟ್ಟಕ್ಕೆ ಹಾಕಬೇಕು.

೪. 'ಎಣಿಲ್' ಬೆಳೆ ಮುಗಿದು ಕೊಯ್ಲುನವರೆಗೆ ಈ ಆಟವನ್ನು ಆಡಬಹುದೆಂಬ ನಂಬಿಕೆಯಿದೆ ಅಂದರೆ ತುಳುವಿನ ಕಾರ್ತೆಲ್ (ಜೂನ್ – ಜುಲೈ)ನಿಂದ ಸೋಣ (ಆಗಸ್ಟ್ –ಸೆಪ್ಟೆಂಬರ್)ದ ಆರಂಭದವರೆಗೆ ಆಡಬಹುದು.

೫. ಎಣಿಲ್ ಬೆಳೆಯು ನಾಟಿ ಕೆಲಸಗಳು ಮುಗಿಯದೆ ಮಣೆಯನ್ನು ಅಟ್ಟದಿಂದ ತೆಗೆಯಬಾರದು.

೬. ಎಣಿಲ್ ಬೆಳೆ ನೇಜಿ ನೆಟ್ಟು ವ್ಯವಸಾಯ ಮುಗಿದ ದಿನ ಮಣೆಯನ್ನು ಅಟ್ಟದಿಂದ ತೆಗೆಯಬೇಕು. ಕೊಯ್ಲು ಆರಂಭವಾಗುವ ದಿನ ಅಟ್ಟಕ್ಕೆ ಹಾಕಬೇಕು.

೭. ಮೇಲಿನ ನಂಬಿಕೆಗಳನ್ನು ಗಮನಿಸಿದರೆ ಈ ಆಟವನ್ನು ಆಟಿ (ಆಷಾಡ) ತಿಂಗಳಲ್ಲಿ ಮಾತ್ರ ಆಡಬೇಕೆಂಬ ನಿಯಮವಿದೆ. ಇದರಿಂದಲೇ ಚೆನ್ನೆಯನ್ನು 'ಆಟಿಯ ಆಟ' ಎಂದು ಕರೆಯುತ್ತಾರೆ. ಕೆಲವು ಪ್ರದೇಶಗಳಲ್ಲಿ ಎಣಿಲ್ ಬೆಳೆಯ ನಾಟಿ ಕೆಲಸಗಳು ಮುಗಿದು ಕೊಯ್ಲುನವರೆಗೆ ಆಡಬಹುದಾಗಿದೆ. ಅಂದರೆ ಜುಲೈ ತಿಂಗಳಿನಿಂದ ಸೆಪ್ಟೆಂಬರ್ ಕೊನೆಯವರೆಗೆ ಆಡಬಹುದು.

**ಐ. <u>ಆಟದ ಕುರಿತಾದ ನಂಬಿಕೆಗಳು</u>**

೧. ಅಮಂಗಳಕರವೆಂದು ಪರಿಗಣಿಸಲ್ಪಟ್ಟ ಆಟಿ ತಿಂಗಳಲ್ಲಿ ಈ ಆಟವನ್ನು ಆಡಬೇಕು. ಬೇರೆ ಕಾಲದಲ್ಲಿ ಆಡಿದರೆ ಕೆಟ್ಟ ಪರಿಣಾಮವನ್ನು ಉಂಟು ಮಾಡುತ್ತದೆ.

೨. ಅಕ್ಕ ತಂಗಿಯರು ಈ ಆಟವನ್ನು ಆಡಬಾರದು

೩. ಗಂಡ –ಹೆಂಡತಿ ಈ ಆಟವನ್ನು ಆಡಬಾರದು.

೪. ಒಂದೇ ತಾಯಿಯ ಮಕ್ಕಳು ಈ ಆಟವನ್ನು ಆಡಬಾರದು.
ಸಾಯಂಕಾಲ ದನವನ್ನು ಹಟ್ಟಿಗೆ ಸೇರಿಸಿದ ನಂತರ ಆಡಬಾರದು.

೫. ಮನೆ ತುಂಬಿಸಿದ (ತೆನೆ ಹಾಕಿದ) ನಂತರ ಯಾವ ಕಾರಣಕ್ಕೂ ಆಡಬಾರದು.

೬. ಚೆನ್ನೆಯಾಟದಲ್ಲಿ ಸುಳ್ಳು ಹೇಳಬಾರದು. ಸುಳ್ಳು ಹೇಳಿದರೆ ಹುಚ್ಚು ಹಿಡಿಯುತ್ತದೆ.

೭. ಜೂಜು ಈ ಆಟವನ್ನು ಆಡಬಾರದು.

೮. ಮೋಸ ಮಾಡಬಾರದು. ಮೋಸ ಮಾಡಿದರೆ ಕೆಟ್ಟ ಪರಿಣಾಮವಾಗುತ್ತದೆ.

೯. ಮಕ್ಕಳು ಈ ಆಟವನ್ನು ಆಡಬಾರದು

ಈ ರೀತಿಯ ನಂಬಿಕೆಗಳಿಗೆ ಎರಡು ಕಾರಣಗಳಿವೆ. ಒಂದು, ಆಟಿಯ (ಆಷಾಡ) ಬಿರು ಮಳೆಯಲ್ಲಿ ಹೊರಗೆ ಯಾವುದೇ ಚಟುವಟಿಕೆಗಳನ್ನು ನಡೆಸಲು ಸಾಧ್ಯವಿಲ್ಲ. ಜುಲೈಯಿಂದ ಸೆಪ್ಟೆಂಬರ್ ತಿಂಗಳವರೆಗೆ ಮಳೆಗಾಲವಾಗಿರುವುದರಿಂದ ಯಾವುದೇ ಚಟುವಟಿಕೆಗಳು ಸಾದ್ಯವಾಗುವುದಿಲ್ಲ. ಇದರಿಂದಲೇ ಆಟಿ ಅನಿಷ್ಟದ ತಿಂಗಳು ಮತ್ತು ಯಾವುದೇ ರೀತಿಯ ಶುಭ ಕಾರ್ಯಗಳು ನಡೆಯಬಾರದೆಂಬ ನಂಬಿಕೆಯಿದೆ. ನಾಟಿ ಕೆಲಸಗಳು ಮುಗಿದು ಬೇಕಾದಷ್ಟು ವಿರಾಮಕಾಲವಿರುವುದರಿಂದ ಚೆನ್ನೆ ಮಣೆಯಿಂದ ಒಳಾಂಗಣ ಆಟವನ್ನು ಆಡುತ್ತಾರೆ. ಎರಡು, ಚೆನ್ನೆಮಣೆಯು ಕೃಷಿ, ಸಂಸ್ಕೃತಿ, ರಾಜಕೀಯ, ಸಂಸ್ಕೃತಿ ಮತ್ತು ತುಳುನಾಡಿನ ಬದುಕಿನ ಬಗ್ಗೆ ತರಬೇತಿ ನೀಡುವ ಮಾಧ್ಯಮವಾಗಿದೆ. ಮಳೆಗಾಲದ ಈ ತಿಂಗಳುಗಳಲ್ಲಿ ಬೇರೆ ಕೆಲಸ ಕಾರ್ಯಗಳು ಇಲ್ಲದಿರುವುದರಿಂದ ಸಂಸ್ಕೃತಿಯ ಕಲಿಕೆಗೆ ಈ ಕಾಲವನ್ನು ಆಯ್ಕೆ ಮಾಡಿರುವುದು ಸಮಂಜಸವಾಗಿದೆ. ಬೇರೆ ತಿಂಗಳುಗಳಲ್ಲಿ ಇದನ್ನು ಆಡಬಾರದೆಂಬ ನಿಷೇದಕ್ಕೂ ಕಾರಣಗಳಿವೆ. ಚೆನ್ನೆಮಣೆ ಭಾವನಾತ್ಮಕವಾದ ಆಟವಾಗಿದೆ ಮತ್ತು ಆಟಗಾರರನ್ನು ಆಕರ್ಷಿಸಿ ಆಟದೊಂದಿಗೆ ಹಿಡಿದಿಟ್ಟು ಕೊಳ್ಳುವ ಗುಣವನ್ನು ಹೊಂದಿದೆ. ಇದರಿಂದ ಬೇರೆ ಕಾಲದಲ್ಲಿ ಇದನ್ನು ಆಡಿದರೆ ತುಳುನಾಡಿನ ಬದುಕಿನ ಇತರ ಚಟುವಟಿಕೆಗಳಿಗೆ ತೊಂದರೆಯಾಗುವುದರಿಂದ ಇದೇ ಕಾಲವನ್ನು ಆಯ್ಕೆ ಮಾಡಿ ಬೇರೆ ತಿಂಗಳುಗಳಲ್ಲಿ ಆಡುವುದನ್ನು ನಿಷೇದಿಸಲಾಗಿದೆ.

# ಅಧ್ಯಾಯ 5

## ಆಟಿ ಆಚರಣೆಗೆ ಸಂಬಂಧಿಸಿದ ನಂಬಿಕೆಗಳ ವಿಶ್ಲೇಷಣೆ

ತುಳುನಾಡಿನಲ್ಲಿ ನಡೆಯುವ ಆಚರಣೆಗಳಿಗೆ ಅದರದೇ ಆದ ಪ್ರಾಚೀನ ಇತಿಹಾಸವಿದೆ. ಭತ್ತ ಬೇಸಾಯದ ಹಿನ್ನೆಲೆಯಲ್ಲಿಯೇ ವರ್ಷದುದ್ದಕ್ಕೂ ಹತ್ತು ಹಲವು ಆಚರಣೆಗಳನ್ನು ಅವು ಈ ನೆಲದ ಸತ್ಯವೆಂದರಿತು ಭಯ ಭಕ್ತಿ ಶ್ರದ್ಧೆಯಿಂದ ಆಚರಿಸಿಕೊಂಡು ಬಂದಿದ್ದಾರೆ. ಈ ಆಚರಣೆ ನಂಬಿಕೆಗಳು ಸತ್ಯ ಮತ್ತು ಸತ್ಯಯುತವಾಗಿದ್ದು ಅವುಗಳಲ್ಲಿ ಜೀವ-ಜೀವನ-ಪರಿಸರ ಸಂರಕ್ಷಣೆಗೆ ಯೋಗ್ಯವಾದ ಮೌಲ್ಯಾಧಾರಿತ ವಿಚಾರಗಳಿವೆ.

ಆಟಿ ತಿಂಗಳಿನಲ್ಲಿ ಒಳಿತು ಕೆಡಕುಗಳು ಹೆಚ್ಚಾಗಿ ಸಂಭವಿಸುತ್ತವೆ ಎಂಬುದಾಗಿ ಜನಪದರು ನಂಬಿದ್ದಾರೆ. 'ಆಟಿ ತಿಂಗೊಳುಡು ಕೇಟ್ ಕೇಳ ಉಪ್ಪುಡುಗೆ (ಆಟಿ ತಿಂಗಳಲ್ಲಿ ಅಂಕೆ ಇರಬೇಕಂತೆ) ಎಂಬ ಗಾದೆಯೂ ಇದೆ. ಅಂದರೆ ಎಲ್ಲಾ ವಿಚರಗಳಲ್ಲೂ ಜತನವಾಗಿರಬೇಕೆಂಬ ನಂಬಿಕೆಯಿದೆ.

"ಆಟಿ ಕುಲ್ಲುನಿ" ಆಟಿ ಆಚರಣೆಯಲ್ಲಿ ಕಂಡುಬರುವ ಒಂದು ವಿಶೇಷ ನಂಬಿಕೆಯಾಗಿದೆ. ಆ ಕಾಲದಲ್ಲಿ ಆಟಿ ತಿಂಗಳು ಕಡು ಕಷ್ಟದ ಕಾಲವೆಂದು ವರ್ಗೀಕರಿಸಲಾಗಿತ್ತು. ಆಟಿಯಲ್ಲಿ ಗದ್ದೆ ಕೆಲಸಗಳೆಲ್ಲವೂ ಮುಗಿದಿರುತ್ತದೆ. ಹೆಣ್ಣು ವರ್ಷವಿಡೀ ಗಂಡನ ಮನೆಯಲ್ಲಿ ದೈಹಿಕವಾಗಿ ಮಾನಸಿಕವಾಗಿ ಸುಸ್ತಾಗಿರುತ್ತಾಳೆ. ಈ ಸಮಯದಲ್ಲಿ ಹೆಣ್ಣು ತನ್ನ ತವರು ಮನೆಯಲ್ಲಿ ಸ್ವಲ್ಪ ಕಾಲ ವಿಶ್ರಾಂತಿ ಪಡೆಯಲು ಹೋಗುವುದನ್ನು "ಆಟಿ ಕುಲ್ಲುನಿ" ಎಂಬುದಾಗಿ (ಆಟಿಯಲ್ಲಿ ಹೆಣ್ಣು ತವರಿಗೆ) ಹೇಳಬಹುದು. ಆಟಿ ತಿಂಗಳಲ್ಲಿ ಮಗಳು ತವರು ಮನೆಗೆ ಹೋಗಿ ಕುಳಿತುಕೊಳ್ಳುವುದು ಹಿಂದೆಯಿಂದ ಬಂದ ರೂಢ ಸಂಪ್ರದಾಯ. ವರ್ಷಪೂರ್ತಿ ಗಂಡನ ಮನೆಯಲ್ಲಿ ಕೆಲಸ ಮಾಡುವ ಹೆಣ್ಣಿಗೆ ಈ ನಂಬಿಕೆ ಸಂಪ್ರದಾಯ. ಒಂದು ರೀತಿಯಲ್ಲಿ ವಿರಾಮವನ್ನು ಮನಸ್ಸಿಗೆ ಮುದವನ್ನು ನೀಡಿ ತವರು ಮನೆಯಲ್ಲಿ ತಾಯಿಯ ಪ್ರೀತಿ ಒಡಹುಟ್ಟಿದವರ ಮಮಕಾರ ನೆಮ್ಮದಿಯನ್ನು ನೀಡುತ್ತದೆ. ಆಟಿ ತಿಂಗಳು ತುಳುವರಿಗೆ ಅನಿಷ್ಟದ ತಿಂಗಳು ಎಂಬುದು ಬೆಳಕಿನಷ್ಟು ಸತ್ಯ. ಈ ರೀತಿಯಾಗಿ ಜನಪದರಿಂದಲೇ ವರ್ಗೀಕರಿಸಲ್ಪಟ್ಟಿದೆ. ನಮ್ಮ ಹಿರಿಯ ತಲೆಮಾರುಗಳು ಕೆಲವೊಂದು ಸಂಪ್ರದಾಯವನ್ನು ಹಲವು ಭಾವನಾತ್ಮಕ ನಂಬಿಕೆಯೊಂದಿಗೆ ಸೃಷ್ಟಿಸಿದ್ದಾರೆ. ಈ ಭಾವುಕ ಸ್ವರೂಪಗಳು ನಂಬಿಕೆಯಾಗಿ ರೂಪತಳೆದು ಅವುಗಳು ಅಂತರಾಳದಲ್ಲಿ ಬೇರೂರಿದಾಗ ಮುಂದಿನ ಪೀಳಿಕೆಯವರೆಗೂ ಅದು ಮುಂದುವರಿಯುವುದು ಸಹಜ. ಹಾಗಾಗಿ ಈ ತಿಂಗಳಲ್ಲಿ ಸತಿ - ಪತಿಯರು ಒಟ್ಟುಕೂಡುವುದು ಸೂಕ್ತವಲ್ಲ ಎಂಬ ಭಾವನೆ ಒಂದೆಡೆ ಆಟಿ ತಿಂಗಳಲ್ಲಿ ಹೆಣ್ಣಿಗೆ ಭ್ರೂಣಾಂಕುರವಾದರೆ ಮುಂದೆ ಅವಳ ಹೆರಿಗೆಯಾಗುವುದು ಸುಗ್ಗಿ ಕಾಲದಲ್ಲಿ ಅದು ಕಡುಬೇಸಿಗೆಯ ಕಾಲವಾಗಿದ್ದು, ಇಂದಿನಂತೆ ಹವಾ ನಿಯಂತ್ರಿತ ವ್ಯವಸ್ಥೆಗಳು, ಫ್ಯಾನ್‌ಗಳು ಇಲ್ಲದ ಕಾಲ. ಹಾಗಾಗಿ ಮದುವೆಯಾದ ಮೊದಲ ವರ್ಷ ಹೆಣ್ಣಿಗೆ ಇದು ಕಡ್ಡಾಯ. ಒಂದರ್ಥದಲ್ಲಿ ಗಂಡು ಹೆಣ್ಣನ್ನು ಆಟಿ ತಿಂಗಳು ಬೇರೆ ಮಾಡುತ್ತದೆ. ಹೊಸದಾಗಿ ಮದುವೆಯಾದ ಹೆಣ್ಣು ಮಗಳು ಈ ತಿಂಗಳಲ್ಲಿ ಗಂಡಿನ ಜೊತೆ ಇರುವ ಹಾಗಿಲ್ಲ. ಮಳೆ - ಬಿಸಿಲಿನ ಹವಾಮಾನದ ಬದಲಾವಣೆಯ ಕಾರಣದಿಂದಾಗಿ ಈ

ತಿಂಗಳು ಜೀವಿಗಳಿಗೆ ಉದ್ರೇಕ ಹೆಚ್ಚು. "ಆಟಿ ಪಂಡ ಘರ್ಷಣೆ ಸಂಭೋಗ ಪನ್ಪಿನ ಅರ್ಥಲಾ ಮಲ್ಪೊಲ್ಯಾಪುಂಡು" (ಆಟಿ ಅಂದರೆ ಘರ್ಷಣೆ, ಸಂಭೋಗ ಎನ್ನುವುದಾಗಿಯೂ ಅರ್ಥವನ್ನು ಮಾಡಿಕೊಳ್ಳಬಹುದು. (ತುಳು ಸಂಸ್ಕೃತಿದ ಪೊಲಬು ಡಾ॥ [ಪಾ.ರಾ.ಆಚರ್ -46) ಹವಮಾನದ ಏರಿಳಿತದಿಂದಾಗಿಯೂ ಸೃಷ್ಟಿ ಕ್ರಿಯೆಯೂ ಈ ಅವಧಿಯಲ್ಲಿ ನಡೆಯುವಂತಿಲ್ಲ. ಅಲ್ಲೂ ಮೊದಲು ಸಂತಾನದ ಹುಟ್ಟು ಹೀಗಾಗುವುದು ಬೇಡ ಎನ್ನುವಂತಹ ಭಾವನೆಯಿಂದಲೂ ಆಕೆಯನ್ನು ಗಂಡನ ಮನೆಯಿಂದ ಬೇರ್ಪಡಿಸಿ ತವರು ಮನೆಗೆ ಕರೆಸಿಕೊಳ್ಳುವುದು ಅಥವಾ ಕಳುಹಿಸುವುದಾಗಿದೆ. ಅಷ್ಟೇ ಅಲ್ಲ ಆಕೆಯ ಗಂಡ ಅವಳ ಮನೆಗೆ ಹೋಗುವುದಕ್ಕೆ ಆ ತಿಂಗಳಲ್ಲಿ ನಿಷೇಧವಿದೆ. ಹಾಗಾಗಿ ಆಕೆ ಗರ್ಭಾವತಿಯಾದರೆ ಸುಡುಬಿಸಿಲ ಬೇಗೆ ಗರ್ಭಿಣಿ ಬಾಣಂತಿ/ಮಗುವಿಗೆ ಆರೋಗ್ಯಕ್ಕೆ ಯೋಗ್ಯವಲ್ಲ ಎಂಬುದು ಇನ್ನೊಂದು ತಿಳಿದವರ ಭಾವನೆ.

ವ್ಯಾವಾಹಾರಿಕ ದೃಷ್ಟಿಯಿಂದ ಇದನ್ನು ನಿವೇದಿಸುವುದೇ ಆದಲ್ಲಿ ಹಿಂದೆ ಕೂಡು ಕುಟುಂಬದ ವ್ಯವಸ್ಥೆಯನ್ನು ಎಲ್ಲೆಡೆ ಕಾಣಬಹುದಾಗಿತ್ತು. ಕಷ್ಟಕಾಲವಾದ ಆಟಿಯಲ್ಲಿ ಉಣ್ಣುವ ತಿನ್ನುವ ವಿಷಯದಲ್ಲಿ ಮನೆಯ ಹಿರಿಯರು ಆ ದಿನಗಳಲ್ಲಿ ಮುತುವರ್ಜಿ ವಹಿಸುತ್ತಿದ್ದರು. ಹಾಗಾಗಿ ಮನೆಯ ಆರ್ಥಿಕ ವ್ಯವಸ್ಥೆ ಇನ್ನಷ್ಟು ಕುಸಿಯದಿರುವಂತೆ ಮುಂಜಾಗ್ರತೆ ಮತ್ತು ದುಡಿಮೆಯಿದ್ದರೆ ಅನ್ನ ಎಂಬ ಅವಿಭಾಜ್ಯ ಕುಟುಂಬದ ಸಣ್ಣತನವೂ ಹೆಂಡತಿ ಮಕ್ಕಳನ್ನು ತವರಿಗೆ ಅಟ್ಟುವ ಹುನಾರದಲ್ಲಿ ಅಡಗಿರುವ ಸಾಧ್ಯತೆ ಇದ್ದಿರಬಹುದು.

ಮಂಗಳೂರಿನ ತೊಕ್ಕೊಟ್ಟಿನ ಕುಂಪಲದಲ್ಲಿರುವ 75 ವರ್ಷದ ಸೀತಮ್ಮ ಅವರಲ್ಲಿ ಈ ಕುರಿಟ್ಟು ಮಾತನಾಡಿದಾಗ "ನಾನು ಮದುವೆಯಾದ ಮೊದಲ ವರ್ಷದಲ್ಲಿ ಆಟಿಗೆ ತವರು ಮನೆಗೆ ಹೋಗಿದ್ದೆ ರೂಢಿಯಂತೆ ಒಂದು ತಿಂಗಳು ತವರು ಮನೆಯಲ್ಲೇ ಇದ್ದೆ" (ಮದಿಮೆದ ಆಯ್ನೆ ಸುರುತ ವರ್ಸೊಟು ಯಾನ್ಲ ಸಂಪ್ರದಾಯದ ಲೆಕ್ಕೊಡು ಆಟಿ ಕುಲ್ಲುದೆ, ಯನ್ನಪ್ಪೆ ಇಲ್ಲಡ್ ಒಂಜಿ ತಿಂಗಳು ಮಟ್ಟ್‌ಗ್ ಕುಲ್ಲುದೆ) ಎಂದು ಅವರು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಹೇಳಿದ್ದಾರೆ.

ಆಟಿ ಅಮಾವಸ್ಯೆಯಂದು ದಾನ ಬಿಟ್ಟು ತೀರ್ಥಸ್ನಾನ ಮಾಡುವ ನಂಬಿಕೆ ಆಚರಣೆಯು ಕಂಡು ಬರುತ್ತದೆ. ಆಟಿ ಅಮಾವಸ್ಯೆಯಂದು ಮದ್ದು ತಂದಿಟ್ಟು ದಾನ ಬಿಡಲು ಹೊಳೆಗೆ ಹೋಗುತ್ತಾರೆ. ಐದು ಬಗೆಯ ಹೂವು, ಮೂರು ಬಗೆಯ ದವಸಧಾನ್ಯ, ತೆಂಗಿನಕಾಯಿ ಐದುಪೈಸೆ (ಪಾಚೀನ), ಐದು ವೀಳ್ಯದೆಲೆ, ಒಂದು ಅಡಿಕೆ, ಗಂಧ ಹಾಗೂ ಬತ್ತಿ ಮುಂತಾದವುಗಳನ್ನು ಸಿದ್ಧಪಡಿಸಿ ಅದನ್ನು ಕದಳಿಬಾಳೆಯಲ್ಲಿ ಹಾಕಿ ಬತ್ತಿಯನ್ನು ಉರಿಸಿಟ್ಟು ಗಂಧ ಹಾಕಿಕೊಂಡು ಎಲ್ಲರೂ ಸಾಲಾಗಿ ನಿಲ್ಲುತ್ತಾರೆ. ಮನೆಯ ಹಿರಿಯ ಎಲೆಯನ್ನು ಕೈಯಲ್ಲಿ ಹಿಡಿದುಕೊಂಡು ಎಲ್ಲರ ತಲೆಗೂ ಮೂರು ಸುತ್ತು ತಂದು ಕೈ ಮುಗಿದು ದಾನ ಬಿಡುತ್ತಾನೆ. ದಾನ ಬಿಟ್ಟಿದ್ದನ್ನು ಯಾರೂ ಹಿಂದಿರುಗಿ ನೋಡಬಾರದೆಂಬ ನಂಬಿಕೆಯಿದೆ, ದಾನ ಬಿಡುವುದು ಹರಿಯುವ ನೀರಿನಲ್ಲಿಯೇ ಆಗಬೇಕು. ಅಂತಿಮವಾಗಿ ಬಿಟ್ಟ ದಾನ ಕಡಲು ಸೇರಬೇಕಾಗುತ್ತದೆ. ಕಡಲ ಕಿನಾರೆಯವರು ಕಡಲಿನಲ್ಲಿ ದಾನಬಿಟ್ಟು ಕಡಲ ಸ್ನಾನ ಮಾಡುತ್ತಾರೆ. ಎಲ್ಲೋ ಬೆಟ್ಟದಲ್ಲಿ ಹುಟ್ಟಿ ಕಾಡುಮಲೆಗಳ ಮಧ್ಯೆ ನದಿಯೊಂದು ನೂರಾರು ಜಾತಿಯ ಗಿಡಮರಗಳ ಬೇರುಗಳನ್ನು ಸ್ಪರ್ಶಿಸಿಕೊಂಡು ಹರಿಯುವುದರಿಂದ ಅದು ಔಷಧೀಯ ಗುಣಗಳನ್ನು ಹೊಂದುತ್ತದೆ. ಆದ್ದರಿಂದ ಹರಿಯುವ ನೀರು

ಎಂದರೆ ಅದು ಪವಿತ್ರವಾಗಿರುತ್ತದೆ. ಹರಿಯುವ ನೀರಿಗೆ ಅಶುದ್ಧತೆಯಿಲ್ಲ ಎಂಬುದು ನಂಬಿಕೆ. ಆದ್ದರಿಂದಲೇ ಆ ದಿನ ಹೊಳೆ ನದಿಗಳಲ್ಲಿ ಅಮಾವಾಸ್ಯೆ ದಿನ ದಾನ ಬಿಡುವುದು ಕಂಡು ಬರುತ್ತದೆ. ಇದು ಒಂದು ರೀತಿಯಲ್ಲು ಜಲದೇವತೆಯನ್ನು ಪೂಜಿಸಿ ಪ್ರಸನ್ನಗೊಳಿಸುವುದು ಆಗಿದೆ. ದಾನ ಬಿಡುವುದರಿಂದ ಜಲದೇವತೆ ಪ್ರಸನ್ನಳಾಗಿ ಸಂತೋಷಗೊಳ್ಳುವಳೆಂಬ ನಂಬಿಕೆ. ಈ ತಿಂಗಳಲ್ಲಿ ರೋಗರುಜಿನಗಳು ಮಾನವರನ್ನು ಪೀಡಿಸುತ್ತದೆ. ಈ ನಿಟ್ಟಿನಲ್ಲಿ ತುಳುವರು ತಮ್ಮನ್ನು ಕಾಪಾಡುವಂತೆ ಜಲದೇವತೆಯನ್ನು ಪ್ರಾರ್ಥಿಸುವ ನೆಲೆಯಲ್ಲಿ ಈ ಆಚರಣೆಯನ್ನು ಗಮನಿಸಿರಬೇಕು. ಇದೇ ರೀತಿ ದಾನ ಬಿಡುವುದರ ಮೂಲಕ ಮನುಷ್ಯನ ಮೈಮನಸ್ಸುಗಳಿಗೆ ಅಂಟಿದೆ. ಕಷ್ಟಕಾರ್ಪಣ್ಯವನ್ನು ನೀರಿನಲ್ಲಿ ಬಿಟ್ಟು ಸ್ನಾನಮಾಡಿ ಪರಿಶುದ್ಧರಾಗುತ್ತೇವೆ ಎಂಬ ನಂಬಿಕೆಯನ್ನು ಇಲ್ಲಿ ಗಮನಿಸಬಹುದು. ಆಟಿ ಅಮಾವಾಸ್ಯೆಯ ದಿನ ಹರಿಯುವ ನೀರು ತೀರ್ಥವಾಗಿರುತ್ತದೆ. ಈ ನೀರಿನಲ್ಲಿ ಸ್ನಾನ ಮಾಡಿದರೆ ಕಷ್ಟಗಳೆಲ್ಲ ದೂರವಾಗುವವು ಎಂಬ ನಂಬಿಕೆ ಜನಪದರಲ್ಲಿದೆ. ತೀರ್ಥಸ್ನಾನ ಮಾಡಿ ಪರಿಶುದ್ಧರಾದ ಮೇಲೆ ಮತ್ತೆ ಆ ಕಷ್ಟಗಳನ್ನು ಅನುಭವಿಸಬಾರದು ಎಂಬುದಕ್ಕಾಗಿ ಜನಪದರು ದಾನ ಬಿಟ್ಟು ಬಳಿಕ ತಿರುಗಿ ನೋಡಬಾರದು ಎಂಬ ಕಟ್ಟುಕಟ್ಟಳೆ. ಮಳೆಗಾಲದಲ್ಲಿ ನೀರಿಗೆ 'ಬಾಗಿನ' ಅರ್ಪಿಸುವ ಕ್ರಮ ಎಲ್ಲೆಡೆಯೂ ಕಂಡು ಬರುತ್ತದೆ ಅಂತೆಯೇ 'ಆಟಿ ಅಮವಾಸ್ಯೆಯ' ದಿನ ದಾನ ಬಿಡುವುದೂ ಕ್ರಮವಾಗಿದೆ.

ಆಟಿ ತಿಂಗಳನಲ್ಲಿ 'ಕಳ್ಳಿ – ಕಾಪು' ಕುತ್ತುವ ಸಂಪ್ರದಾಯವಿದೆ. ಗದ್ದೆ, ತೋಟ, ತರಕಾರಿ ಸಾಲುಗಳಿಗೆ ಕುತ್ತುವುದರಿಂದ ಅವುಗಳಿಗೆ ಜನರ ಕೆಟ್ಟ ದೃಷ್ಟಿ ಬೀಳುವುದಿಲ್ಲ ಎಂಬುದು ಜನಪದರ ನಂಬಿಕೆ. 'ದೃಷ್ಟಿ' ಬೀಳುವುದು ಎಂದರೆ ಕೆಲವು ಜನರು ಬೆಳೆಯ ಬಗ್ಗೆ ಯಾವುದೇ ರೀತಿ ಏನಾದರೂ ಹೇಳಿದರೆ ಆ ಬೆಳೆ ಹಾಳಾಗುತ್ತದೆ ಎಂಬುದು ನಂಬಿಕೆ. ಹಾಗಾಗಿ 'ಕಳ್ಳಿ' ಯಲ್ಲಿ 'ದೃಷ್ಟಿ' ನಿವಾರಕ ಮಾಂತ್ರಿಕ ಶಕ್ತಿ ಇದೆ ಎಂದು ಜನ ನಂಬಿದ್ದಾರೆ. ಈ 'ಕಳ್ಳಿ'ಯಲ್ಲಿ ವಿಶೇಷ ಔಷಧೀಯ ಗುಣಗಳಿದ್ದು ಇದು ಬೆಳೆಗಳ ರಕ್ಷಣೆ ಮಾಡುತ್ತದೆ. ಎಂಬಂತೆ ಜನಪದರ ನಂಬಿಕೆಯ ಹಿಂದೆ ವಿಜ್ಞಾನದ ವಿವರಗಳಿವೆ. ಕಳ್ಳಿಯ ಸುತ್ತ ವಿವಿಧ ಜಾತಿಯ ಎಲೆಗಳನ್ನು ಇಡುವುದು ಕೂಡ ಜನಪದರ ನಂಬಿಕೆಯ ಪ್ರಕಾರ 'ಮೂಲಿಗೆ' ಎಂದರೆ ದೋಷ ನಿವಾರಣೆಗೆ ಮಾಡುವ ಕ್ರಮ ಎಂದರ್ಥ.

'ಕಳ್ಳಿ' ಗಿಡ ಇದೊಂದು ಜಾತಿಯ ಹಾಲು ಬರುವ ಸಸ್ಯ. ಇದರಲ್ಲಿ ಮುಳ್ಳುಗಳಿರುತ್ತವೆ. ಇದರ ಹಾಲು ಕಣ್ಣಿಗೆ ಬಿದ್ದರೆ ಕಣ್ಣು ಕುರುಡಾಗುತ್ತದೆ. ಅಂತಹ ವಿಷಕಾರಕ ಶಕ್ತಿ 'ಕಳ್ಳಿ' ಗಿಡದ ಹಾಲಿಗಿದೆ. 'ಕಳ್ಳದ ಕೈತ್ತಲ್ ಕಣ್ಣ್‌ದ ಜೋಕೆ' (ಕಳ್ಳಿಯ ಹತ್ತಿರ ಕಣ್ಣಿನ ಜಾಗ್ರತೆ) 'ದಪ್ಪಂದ್ ಕಳ್ಳಿ, ಕನಪ್ಪಟೆದ ಪೇರ್ ಪರ್ಪೆರ?' (ದಪ್ಪ ಇದೆಯೆಂದು ಕಳ್ಳಿ ಇಲ್ಲವೆ ಕನಪ್ಪಟೆ ಎಂಬ ವಿಷಕಾರಕ ಗಿಡದ ಹಾಲನ್ನು ಕುಡಿಯುತ್ತಾರಾ?) ಎಂಬ ಗಾದೆಗಳೇ ಇದೆ.

'ಕಳ್ಳಿ'ಯನ್ನು ಬಿದಿರಿನ 'ಅಂಡೆ'(ಚೊಂಬು)ಯಲ್ಲಿಡುವಾಗ ಅದಕ್ಕೆ ಒಂದು ಚೂರು ಮಣ್ಣು ಹಾಕುವುದು ಆ 'ಕಳ್ಳಿ' ಜೀವಂತವಾಗಿರಲೆಂದು. ಹಾಗೆಯೇ ಅದರ ಸುತ್ತ ವಿವಿಧ ಜಾತಿಯ ಎಲೆಗಳನ್ನು ಇಡುವುದು ಕೂಡ ಜನಪದರ ನಂಬಿಕೆಯ ಪ್ರಕಾರ 'ಮೂಲಿಗೆ' ಎಂದರೆ ದೋಷ ನಿವಾರಣೆಗೆ ಮಾಡುವ ಕ್ರಮ ಎಂದರ್ಥ. ಪ್ರಕೃತಿಯಲ್ಲಿ ದೊರೆಯುವ ವಸ್ತುಗಳಿಂದಲೇ ತಮ್ಮ ಬದುಕಿನ ನಿರ್ವಹಣೆ ಮತ್ತು ದೋಷ ನಿವಾರಣೆಗಳನ್ನು ಮಾಡಿಕೊಳ್ಳುವುದು ಇಲ್ಲಿ ತಿಳಿದುಬರುತ್ತದೆ.

ಈ ಹಿನ್ನೆಲೆಯಲ್ಲಿ 'ಕಳ್ಳಿ' ಮತ್ತು 'ಕಾಪು'ಗಳಿಗೆ ಸಂಬಂಧಿಸಿದಂತೆ ದೊರೆಯುವ ಈ ವಿವರಣೆಯನ್ನು ವಿಶೇಷವಾಗಿ ಗಮನಿಸಬೇಕು. ಕಳ್ಳಿಯನ್ನು ಕುರಿತು ಹಾಲನ್ನು ದ್ರವಿಸುವ ಮೂರ್ನಾಲ್ಕು ಪ್ರಭೇದಗಳುಳ್ಳ ಸಸ್ಯ ಹಾಲುಗಳ್ಳಿ, ಕೋಲುಗಳ್ಳಿ, ಪಾಪಸುಕಳ್ಳಿ, ಮುಂತಾದುವೇ ಅದರ ಪ್ರಭೇದಗಳು ಕೋಲುಗಳ್ಳಿ ಶ್ರೇಷ್ಠವೆಂಬ ಭಾವನೆಯಿಂದ ಕರ್ನಾಟಕದ ಕೆಲವು ಭಾಗಗಳಲ್ಲಿ ಅದನ್ನು ಮದುವೆ ಸಂದರ್ಭದ ಶಾಸ್ತ್ರಕ್ಕೆ ಬಳಸುವುದುಂಟು. ಚಪ್ಪರವನ್ನು ಹಾಕುವ ದಿನ ಒಂದು ಕೋಲುಗಳ್ಳಿಯ ಕೊಂಬೆ ಹಾಗೂ ಎರಡು ಬಿದಿರು ಬೊರಾಲುಗಳನ್ನು ವಾದ್ಯಸಮೇತ ಊರ ಮುಂದಿನ ದೈವಸ್ಥಾನದಿಂದ ತಂದು ಚಪ್ಪರದ ಮಧ್ಯಭಾಗದ ನಿರ್ದಿಷ್ಟ ಜಾಗದಲ್ಲಿ ನೆಡಲಾಗುತ್ತದೆ.

ಕಾಪು ನೆಡುವುದರಿಂದ ದೃಷ್ಟಿ ತಾಗುವುದಿಲ್ಲವೆಂದು ನಂಬುವರು. ಕಾಸರಕ ಗಿಡದ ಗೆಲ್ಲನು ಗದ್ದೆಯಲ್ಲಿ ಆ ದಿನ ನೆಡುವುದರಿಂದ ಬೆಳೆಗೆ ಬರುವ ಮಾರಿಯನ್ನು 'ಕಾಯರ್' ತಡೆಯುತ್ತದೆ ಎಂದು ಜನಪದರು ಹೇಳುತ್ತಾರೆ. ಉತ್ತರ ಕರ್ನಾಟಕದಲ್ಲಿ ಇಂಥದಕ್ಕೆ 'ಬೆದರು', 'ಬೆಚ್ಚ' ಎಂದೂ ಪಡೆಯುತ್ತಾರೆ. ಕೃಷಿಕರಿಗೆ ಹಿಂದಿನ ಕಾಲದಲ್ಲಿ ತಮ್ಮ ಜೀವನಾಧಾರವಾದ ಬೆಳೆಯ ಮೇಲೆ ಇದ್ದ ಅತೀವ ಕಾಳಜಿಯನ್ನು ಇದು ಪ್ರಕಟಿಸುವುದು. ಪ್ರಕೃತಿ ದೊರೆಯುವ ವಸ್ತುಗಳಿಂದಲೇ ತಮ್ಮ ಬದುಕಿನ ನಿರ್ವಹಣೆ ಮತ್ತು ದೋಷ ನಿವಾರಣೆಗಳನ್ನು ಮಾಡಿಕೊಳ್ಳುವುದು ಇಲ್ಲಿ ತಿಳಿದು ಬಂದಿರುತ್ತದೆ.

ಆಟಿ ಅಮಾವಸ್ಯೆಯ ದಿನ ಭೂತಗಳಿಗೆ ಅಗೆಲು ಹಾಕುವ ಕ್ರಮವು ಇದೆ. ದೊಡ್ಡ ದೊಡ್ಡ ಭೂತಗಳಿಗೆಲ್ಲ 'ಅಗೆಲು', 'ಕೋಲ', 'ತಂಬಿಲ' ಕೊಡಲಾಗುತ್ತದೆ. ಇನ್ನು ಕಲ್ಲುರ್ಟಿ ರಾಹು, ಗುಳಿಗ ಮೊದಲಾದ ಕುಲದೇವಗಳಿಗೆ ಮಾತ್ರ 'ಆಟಿ' ತಿಂಗಳ ಅಮಾವಸ್ಯೆಯಂದು 'ಅಗೆಲು' ಹಾಕುವ ಕ್ರಮವೂ ಇದೆ. ಈ ಭೂತಗಳು ಕುಟುಂಬಕ್ಕೆ ತೀರ ಹತ್ತಿರವಾದುದರಿಂಡ ಕಷ್ಟ ನಿವಾರಿಸಲು ಪ್ರಾರ್ಥಿಸುವ ನೆಲೆಯಲ್ಲಿ ಅಮಾವಸ್ಯೆಯ ದಿನ 'ಅಗೆಲು' ಹಾಕುವ ಸಾಧ್ಯತೆ ಇದೆ. ಹೀಗೆ ವಿವಿಧ ನೆಲೆಗಳನ್ನು ಗುರುತಿಸಬಹುದಾದರೂ ಕಷ್ಟಗಳನ್ನು ಪರಿಹರಿಸುವ ಹಿನ್ನೆಲೆಯಲ್ಲಿ ಕುಲದೇವತೆಗಳಲ್ಲಿ ಪ್ರಾರ್ಥನೆ ಮಾಡುವ ಆಶಯವೇ ಆಗಿದೆ. ಆಟಿ ತಿಂಗಳ ಪೂರ್ತಿ ಅಧಿಕಾರ ಆಟಿ ಕಳೆಂಜನಿಗೆ ಆದಾಗ್ಯೂ ರಾಹು ಗುಳಿಗ, ಕಲ್ಲುರ್ಟಿ, ಮೊದಲಾದ ದೈವಗಳಿಗೆ 'ಅಗೆಲು' ಹಾಕುವ ಕ್ರಮವೂ ಇದೆ. ಆದರೆ ಕಳೆಂಜ ಬರುವುದು ಆಟಿ ತಿಂಗಳಲ್ಲಿ ಮಾತ್ರ. 'ಆಟಿ ಕಳೆಂಜ' ಬರುವುದು ಆಟಿ ತಿಂಗಳಲ್ಲಿ ಮತ್ರ. 'ಆಟಿ ಕಳೆಂಜ ತುಳುನಾಡಿನ ವಿಶೇಷ ಜಾನಪದ ಕುಣಿತ ಎಂಬುದನ್ನು ಲಕ್ಷಿಸಬೇಕು. ಆಟಿ ತಿಂಗಳಲ್ಲಿ ಭಯದ ಸ್ಥಿತಿಯನ್ನು ದೂರ ಮಾಡುವ ಅಲೌಕಿಕ ಶಕ್ತಿಗಳು ಬೇಕೆ ಬೇಕು. ಈ ನೆಲೆಯಲ್ಲಿ ಆ ಭಯದ ನೆಲೆಗಳಾಗಿ ಜನಪದರ ನಂಬಿಕೆಯ ಆಧಾರದಲ್ಲಿ ಆರಾಧನೆಗೊಳ್ಳುತ್ತವೆ. ಹಿರಿಯರು ಸತ್ತು ಕುಲೆಗಳಾಗಿ ಜೊತೆಯಲ್ಲಿರುವರು ಹಾಗೂ ಅಗೋಚರವಾಗಿ ಅವರು ನಮ್ಮನ್ನು ಹರಸುವರು ಎಂಬ ನಂಬಿಕೆ ಜನಪದ ತುಳುವರಿಗಿದೆ. ಹೊರಗಿದ್ದು ಬೆಳೆ ಜಾನುವರುಗಳನ್ನೆಲ್ಲ ಗುಳಿಗವಾಯುಪುತ್ರ ರಕ್ಷಿಸುವನು. ಶಕ್ತಿದೇವತೆ ಕಲ್ಲುರ್ಟಿ ತನ್ನ ಮಾಯವೀತನದಿಂದ ಮರೆ ಮಾಡಿಯೂ ಜೀವಂತವಾರಿಗಿಸಿಬಲ್ಲಳು.

ಸಾಮಾನ್ಯವಾಗಿ ಆಟಿ ತಿಂಗಳಿನಲ್ಲಿ ಯಾವುದೇ ವಿಶೇಷ ಪೂಜೆಗಳು ನಡೆಯುವುದಿಲ್ಲವೆಂಬುವುದು ನಂಬಿಕೆ. ಆದರೆ ಈ ಸಾಲುಗಳಿಗೆ ವಿರೋಧವೆಂಬಂತೆ ಲೇಖನವೊಂದು ಹೀಗೆ ಹೇಳುತ್ತದೆ.

ಕಾಸರಗೋಡು ಜಿಲ್ಲೆಯ ಆದೂರು ಕಲ್ಲುರ್ಟಿ -ಕಲ್ಕುಡ ದೈವಸ್ಥಾನ ಹತ್ತೂರಿನಲ್ಲೂ ಪ್ರಸಿದ್ಧ. ಸಾಮಾನ್ಯವಾಗಿ ಆಟಿ ತಿಂಗಳಲ್ಲಿ ಎಲ್ಲೂ ಕೋಲ ನಡೆಯುವುದಿಲ್ಲ. ಆದರೆ ಇಲ್ಲಿ ಆಟಿಯ ಕೋಲವೇ ಪ್ರಧಾನ. ಆಟಿ ತಿಂಗಳ ಒಂದನೇ ದಿನದಿಂದ ಸಿಂಹ ಸಂಕ್ರಮಣದವರೆಗೆ ಇಲ್ಲಿ ಕೋಲ ವೈಭವ. ಸಂಕ್ರಮಣದ ನೇಮೋತ್ಸವದಂದು ಪುತ್ತೂರು, ವಿಟ್ಲ, ಕುಂಬಳೆ, ಸೀಮೆಗಳಿಗೆ ಸೇರಿದ ಸುಮಾರು ೨ ಸಾವಿರಕ್ಕೂ ಅಧಿಕ ಭಕ್ತರು ಇಲ್ಲಿಗೆ ಆಗಮಿಸಿ ಹರಿಕೆ ಸಲ್ಲಿಸಿ ಕೃತ್ಯಾರ್ಥರಾಗುತ್ತಾರೆ.

ಆದೂರು ಏಳ್ನಾಡು ತರವಾಡು ಮನೆಯವರ ನೇತೃತ್ವದಲ್ಲಿ ನಡೆಯುವ ಕಲ್ಲುರ್ಟಿ ಹಾಗೂ ಕಲ್ಕುಡ ದೈವಗಳ ನೇಮೋತ್ಸವಕ್ಕೆ ಆದೂರು ಗುತ್ತು ಪಟೇಲ ನಾರಾಯಣ ಭಂಡಾರಿ ಮೊಕ್ತೇಸರರಾಗಿ ನೇತೃತ್ವ ನೀಡುತ್ತಿದ್ದಾರೆ.

**ಹರಿಕೆ ಕೋಲ** : ಆಟಿ ತಿಂಗಳ ಆರಂಭದ ದಿನದಿಂದ ಸಂಕ್ರಮಣದ ತನಕ ಸೋಮವಾರವನ್ನು ಹೊರತುಪಡಿಸಿ ಉಳಿದ ಎಲ್ಲ ದಿನಗಳಲ್ಲಿ ಕೋಲ ನಡೆಯುವುದು ವಾಡಿಕೆಯಾಗಿದೆ.

**ಹರಿಕೆ ಸಲ್ಲಿಸುವುದು** :- ಗ್ರಾಮ ನಿವಾಸಿಗಳು (ಸ್ಥಿರವಾಗಿ ವಾಸ್ತವ್ಯ ಇರುವವರು) ಭಕ್ತರು ಮತ ಧರ್ಮ ಅತೀತವಾಗಿ ಈ ದೈವಸ್ಥಾನಕ್ಕೆ ಬಂದು ಹರಿಕೆಯನ್ನು ಸಲ್ಲಿಸುತ್ತಾರೆ. ದೈವಕ್ಕೆ ಪಟ್ಟೆ ಸೀರೆ, ಬೆಳ್ಳಿ - ಬಂಗಾರದ ಹೂ, ಸಮ್ಮಾನಾ (೫ ಕುಡ್ತೆ ಅಕ್ಕಿ, ಕೋಳಿ, ಅಡುಗೆಗೆ ಬೇಕಾದ ಸಂಬಾರ ವಸ್ತುಗಳು) ಅವರವರ ಸಂಕಲ್ಪದಂತೆ ಆಭರಣ, ಹಣ ಅಕ್ಕಿ, ಭಂಡಾರದ ಕಾಣಿಕೆ ವಸ್ತು ರೂಪದಲ್ಲಿ ಹರಿಕೆ ನೀಡಲಾಗುತ್ತದೆ.



ತುಳುನಾಡಿನ ಮಲೆಕುಡಿಯ ಜನಾಂಗಕ್ಕೆ ಸಂಬಂಧಿಸಿದಂತೆ 'ಸುಬ್ರಹ್ಮಣ್ಯ' ಪ್ರದೇಶದಲ್ಲಿ ಆಟಿ ಅಮಾವಸ್ಯೆ ದಿನ ಕಲ್ಲುರ್ಟಿ ಭೂತಕ್ಕೆ ಆಹಾರ ಬಡಿಸುತ್ತಾರೆ. ಕಾರ್ಕಳ ಪ್ರದೇಶದಲ್ಲಿ ಗುಳಿಗ ಭೂತಕ್ಕೆ ಬಡಿಸುತ್ತಾರೆ. ಆ ದಿನ ಸಂಜೆ ಮಾಂಸದ ಅಡುಗೆಯನ್ನು ಮಾಡುತ್ತಾರೆ ಎಂದು ಹೇಳಲಾಗಿದೆ. 'ಮುಗೇರ' ಜನಾಂಗಕ್ಕೆ ಸಂಬಂಧಿಸಿದಂತೆ 'ಆಟಿ ಅಮಾವಾಸ್ಯೆ' ದಿನ ಪಾಲೆ (ಹಾಲೆ)ಮರದ ಸಿಪ್ಪೆ ತರಲು ಮನೆಯ ಒಡತಿ ಹೋಗಬೇಕೆಂದೂ, ಪ್ರತಿಯೊಬ್ಬ ಸದಸ್ಯರೂ ಹೊಳೆಗೆ ಹೋಗಿ ದಾನ ಬಿಡಲೇಬೇಕೆಂದೂ, ದಾನದಲ್ಲಿ ಪಂಚ ವಿಧದ ಧಾನ್ಯಗಳು, ಒಂದು ನಾಣ್ಯ, ಹೂ ಇತ್ಯಾದಿಗಳು ಇರುತ್ತವೆ ಎಂದು ಹೇಳಾಲಾಗಿದೆ. ಒಟ್ಟಿನಲ್ಲಿ ವಕ್ತೃಗಳ ಮತ್ತು ವಿದ್ವಾಂಸರ ಅಭಿಪ್ರಾಯಗಳನ್ನು ಒಟ್ಟಾಗಿ ಗಮನಿಸುವಾಗ 'ಆಟಿ ಅಮವಾಸ್ಯೆ' ತುಳುವರ ವಾರ್ಷಿಕ ಆವರ್ತನದ ಪ್ರಮುಖ ಆಚರಣೆ ಎಂಬುದು ತಿಳಿಯುತ್ತದೆ. ಆಚರಣೆಯಲ್ಲಿ ಸಣ್ಣ ಪುಟ್ಟ ವ್ಯತ್ಯಾಸಗಳು ಕಂಡುಬಂದರೂ ಮೂಲದಲ್ಲು ಆಚರಣೆ ಒಂದೇ ಆಗಿದ್ದಂತೆ ತೋರುತ್ತದೆ. ಈ ಆಚರಣೆಯಲ್ಲಿ ಕಂಡುಬರುವ ಸಣ್ಣಪುಟ್ಟ ವ್ಯತ್ಯಾಸಗಳಿಗೆ ಪ್ರಾದೇಶಿಕ ಮತ್ತು ಜನಾಂಗಿಕ ವ್ಯವಸ್ಥೆಗಳೇ ಕಾರಣಗಳಾಗಿರಬೇಕು. ಆದ್ದರಿಂದ 'ಆಟಿ ಅಮಾವಸ್ಯೆ' ಕೇವಲ ಒಂದು ಆಚರಣೆಯಲ್ಲ; ಹಲವು ಆಚರಣೆಗಳ ಸಂಗಮ ಮತ್ತು ವ್ಯಕ್ತಿಯ ದೈಹಿಕ ಮಾನಸಿಕ , ಆರೋಗ್ಯ ರಕ್ಷಣೆ ಮತ್ತು ಕೃಷಿ ಚಟುವಟಿಕೆಗಳ ಸಂರಕ್ಷಣೆಯೇ ಇದರ ಮೂಲ ಆಶಯವಾಗಿ ಕಂಡುಬರುತ್ತದೆ. ಈ ದಿನಗಳಲ್ಲಿ ಒಳತು ಕೆಡಕುಗಳು ಹೆಚ್ಚಾಗಿ ಸಂಭವಿಸುತ್ತವೆ ಎಂಬುದಾಗಿ ಜನಪದರು ನಂಬಿದ್ದಾರೆ. ಹಾಗಾಗಿ ಈ ದಿನಗಳಲ್ಲಿ ವಿಶೇಷವಾಗಿ ಆಚರಣೆ, ಆರಾಧನೆಗಳನ್ನು ನಡೆಸಿಕೊಂಡು ಬಂದಿದ್ದಾರೆ. ಅಂತಹ ದಿನಗಳಲ್ಲಿ 'ಆಟಿ ಅಮಾವಸ್ಯೆ' ಅತ್ಯಂತ ಮಹತ್ವದ್ದಾಗಿದೆ.

ಆಟಿ ಅಮವಾಸ್ಯೆ ದಿನದ ಬೆಳಗ್ಗಿನ ಉಪಾಹಾರಕ್ಕೆ ಹೆಂಗಸರು 'ಮರಚೇವು' (ಮರಕೆಸು)ವನ್ನು ಹಾಕಿದ 'ಪತ್ರೊ ಅಡ್ಯೆ' (ಅಕ್ಕಿತಿಂಡಿ) ಮಾಡಿರುತ್ತಾರೆ. ಎಲ್ಲರೂ 'ಪತ್ರೊಡೆ' ಸೇವಿಸುತ್ತಾರೆ. ಉಳಿದಂತೆ ಕೆಲವು ಮನೆಗಳಲ್ಲಿ ರಾಹು, ಕಲ್ಲುರ್ಟಿ, ಗುಳಿಗ ಮೊದಲಾದ ಸಣ್ಣ ಸಣ್ಣ ಭೂತಗಳಿಗೆ ಬಡಿಸುತ್ತಾರೆ. ಈ ಭೂತಗಳಿಗೆ ಮಧ್ಯಾಹ್ನ ಇಲ್ಲವೆ ಸಂಜೆ 'ಅಗೆಲು' ಬಡಿಸಿ ಪ್ರಾರ್ಥನೆ ಮಾಡಿ ಕೈ ಮುಗಿಯುತ್ತಾರೆ. ಮಧ್ಯಾಹ್ನ ಎಂದಿನಂತೆ ಊಟ ನಡೆಯುತ್ತದೆ. ರಾತ್ರಿ ಭೂತಗಳಿಗೆ ಬಡಿಸಿದ ಮನೆಯಲ್ಲಿ ಸಾಮಾನ್ಯವಾಗಿ ಕೋಳಿ ಪದಾರ್ಥವಿರುತ್ತದೆ. ರೊಟ್ಟಿ ಮಾಡುತ್ತಾರೆ. ಕೆಲವರು ಮೀನು ಪದಾರ್ಥ ಮಾಡಿದರೆ ಕೆಲವರು ತರಕಾರಿ ಪದಾರ್ಥ ಮಾಡಿ ಏನಾದರೂ 'ಅಡ್ಯೆ' (ಅಕ್ಕಿತಿಂಡಿ) ಮಾಡುವುದುಂಟು. ಸಾಮಾನ್ಯವಾಗಿ 'ಆಟಿ ಅಮಾವಾಸ್ಯೆ'ಗೆ ರೊಟ್ಟಿ ಮಾಡುವುದು ಹೆಚ್ಚು ಕಂಡು ಬರುತ್ತದೆ. ಗುಡ್ಡೆಯಲ್ಲಿ ಬೆಳೆಯುವ 'ಕೇನೆಕಂಡೆ' (ಕೆಸುಗಡ್ಡೆ) ತಂದು ಅಕ್ಕಿಯ ಜೊತೆಗೆ ಕಡೆದು 'ಕೇನೆದ ಪುಂಡಿ' ಮಾಡುತ್ತಾರೆ. ಬೆಳಗ್ಗೆಯ 'ಪಾಲೆ' (ಹಾಲೆ) ಮರದ ರಸ, ಪತ್ರೊಡೆ ಮತ್ತು ರಾತ್ರಿಯ 'ಅಡ್ಯೆ' (ಅಕ್ಕಿತಿಂಡಿ) ಪದಾರ್ಥ ಇವುಗಳನ್ನು ಮನುಷ್ಯ ಸ್ವೀಕರಿಸುವಾ ಮೊದಲು 'ಕುಲೆ'ಗಳಿಗೆ (ಪಿತೃಗಳಿಗೆ) ಬಡಿಸುವುದುಂಟು. ಈ ಕೆಲಸವನ್ನು ಮನೆಯ ಹೆಂಗಸರೇ ಹೆಚ್ಚಾಗಿ ಮಾಡುತ್ತಾರೆ. ಹೀಗೆ 'ಆಟಿ' ಅಮಾವಸ್ಯೆ' ಯನ್ನು ತುಳುವರು ಅತ್ಯಂತ ಭಕ್ತಿ ಶ್ರದ್ಧೆಯಿಂದ ವ್ಯವಸ್ಥಿತವಾಗಿ ನಡೆಸಿಕೊಂಡು ಬರುವುದು ಅಧ್ಯಯನದಿಂದ ತಿಳಿದು ಬರುತ್ತದೆ. ಆದರೆ ಹುಟ್ಟುಸಾವುಗಳ ಸೂತಕಗಳು ಬಂದರೆ ಈ ಆಚರಣೆಯನ್ನು ಮಾಡುವುದಿಲ್ಲ.

ಅಮಾವಸ್ಯೆಯ ಆಚರಣೆಗಳಿಗೆ ಸಂಬಂಧಿಸಿದಂತೆ ನೋಡಿದರೆ ಕರ್ನಾಟಕದಲ್ಲಿ ಪ್ರತಿಯೊಂದು ಅಮಾವಸ್ಯೆಯೂ ಒಂದಲ್ಲ ಒಂದು ರೀತಿಯಲ್ಲಿ ಆಚರಣೆಗೆ ಸಂಬಂಧಿಸಿರುವುದು ಕಂಡುಬರುತ್ತದೆ. ಉದಾಹರಣೆಗೆ – 'ಕರಗದ ಅಮಾವಸ್ಯೆ', 'ಬಾದಾಮಿ ಅಮಾವಸ್ಯೆ', 'ಮಣ್ಣೆತ್ತಿನ ಅಮಾವಸ್ಯೆ', ಭೀಮನ ಅಮಾವಸ್ಯೆ', 'ದಿವಸೀ ಅಮಾವಸ್ಯೆ', 'ಬೆನಕದ ಅಮಾವಸ್ಯೆ', 'ಪಿಠೋರಿ ಅಮಾವಸ್ಯೆ', 'ಸರ್ವಪಿತೃ ಅಮಾವಸ್ಯೆ', 'ದೀಪಾವಳಿ ಅಮಾವಸ್ಯೆ', 'ಛಟ್ಟೀ ಅಮಾವಸ್ಯೆ', 'ಎಳ್ಳಮಾವಸ್ಯೆ', 'ಯುಗಾದಿ ಅಮಾವಸ್ಯೆ', ಇತ್ಯಾದಿ ಅಮಾವಸ್ಯೆ ಆಚರಣೆಗಳನ್ನು ಉಲ್ಲೇಖಿಸಬಹುದು.

# ಅಧ್ಯಾಯ 6

## ಆಟಿ ಆಚರಣೆಯ ಆಹಾರ ಪದ್ಧತಿ/ಔಷಧೀಯ ಆಹಾರ ಪದ್ಧತಿ

ಮಹತ್ವ ಪೂರ್ಣವಾದ ಮೌಲ್ಯಗಳುಳ್ಳ ಆಟಿ ಆಚರಣೆಯಲ್ಲಿ ತುಳುವರು ಸೇವಿಸುವ ಆಟಿ ತಿಂಗಳಿನ ಆಹಾರಗಳಲ್ಲಿಯ ವೈಶಿಷ್ಟ್ಯಗಳಿದ್ದವು. ಕೂಡಿಟ್ಟ ದವಸ ಧಾನ್ಯಗಲು ಮುಗಿಯುವ ಕಾಲ ಆಟಿ. ಹೀಗಿರುವಾಗ ಹಿಂದಿನ ಕೂಡು ಕುಟುಂಬದ ಜನರು ಮೂರು ಹೊತ್ತಿನ ಊಟಕ್ಕಾಗಿ ಬಹಳ ಪರಿತಪಿಸುವಂತಹ ಕಾಲವಾಗಿ ಆಟಿ ತಿಂಗಳು ಪರಿಣಮಿಸುತ್ತದೆ. ಪರ್ಯಾಯವಾಗಿ ಈ ತಿಂಗಳಿನ ಮಳೆ – ಬಿಸಿಲಿನ ವಾತಾವರಣವು ಕೃಷಿ ವ್ಯವಸಾಯ ಆರೋಗ್ಯವಾಗಿದ್ದು, ಯಾವುದೇ ರೀತಿಯ ಆಹಾರವು ಉತ್ಪತ್ತಿಯಾಗುವುದಿಲ್ಲ. ಕಾರ್ತಿಕ ತಿಂಗಳಿನಲ್ಲಿ ಕೂಡಿಟ್ಟ ಆಹಾರ ಧಾನ್ಯಗಳು ಬರಿದಾದ ಕಾರಣದಿಂದಾಗಿಯೂ ಬದಲಿ ಆಹಾರವನ್ನು ಹೊಂದಿಸಿಕೊಳ್ಳುವುದು ತುಳುವರಿಗೆ ಅನಿವಾರ್ಯವಗುವುದು.





೧. **ಆಟಿಯ ತಿಂಡಿ ತಿನಿಸುಗಳು :-**

ವಿಪರೀತ ವಾತಾವರಣವಿರುವ ಸಂದರ್ಭದಲ್ಲಿ ಮನುಷ್ಯನ ದೇಹದಲ್ಲಿ ಸಮರ್ಪಕ ರೀತಿಯಲ್ಲಿ ಶೀತೋಷ್ಣವನ್ನು ಹೊಂದಿಸಿಕೊಳ್ಳುವ ಅಗತ್ಯವಿದೆ. ಈ ನಿಜಾಂಶವನ್ನು ತಿಳಿದ ನಮ್ಮ ಪೂರ್ವಜರು ಈ ಸಮಯದಲ್ಲಿ ಹಳ್ಳಿಪ್ರದೇಶದಲ್ಲಿ ದೊರಕುವ ಸೊಪ್ಪು, ತರಕಾರಿ, ಬೇರು, ಗೆಣಸು ಮೊದಲಾದವುಗಳನ್ನು ಆಹಾರದಲ್ಲಿ ಬಳಸುವ ಮೂಲಕ ಈ ಸಮಸ್ಯೆಗೆ ಪರಿಹಾರವನ್ನು ಕಂಡುಕೊಂಡರು. ಕೈಗೆಟಕುವ ಆಹಾರಗಳನ್ನು ಸೇರಿಸಿಕೊಂಡು ಆಟಿ ತಿಂಗಳನ್ನು ಕಳೆಯುತ್ತಿದ್ದರು. ಅವುಗಳಲ್ಲಿ ಈ ಕೆಳಗಿನವು ಪ್ರಮುಖವಾದವುಗಳು. ಇವು ಆಟಿ ತಿಂಗಳಲ್ಲಿ ಜನರ ಆಹಾರದ ಅವಶ್ಯಕತೆಗಳನ್ನು ಪೂರೈಸುವುದು ಮಾತ್ರವಲ್ಲದೆ ಅನೇಕ ಔಷಧೀಯ ಸತ್ವಗಳನ್ನು ಹೊಂದಿದ್ದು

ಮಾನವನ ದೇಹದ ಆರೋಗ್ಯ ಮತ್ತು ಉಷ್ಣತೆಯ ಸಮತೋಲನವನ್ನು ಕಾಯ್ದುಕೊಳ್ಳುವಲ್ಲಿ ಸಹಕಾರಿಯಾಗಿದ್ದವು ಎನ್ನುವುದು ವೈದ್ಯಕೀಯ ಪರಿಣಿತರ ಅಭಿಪ್ರಾಯವೂ ಹೌದು.





ಅ. ತುಳುನಾಡಿನಲ್ಲಿ ಮಳೆಗಾಲದಲ್ಲಿ ಹೇರಳವಾಗಿ ಬೆಳೆಯುವ ಕೆಸುವಿನ ಎಲೆ ಮತ್ತು ದಂಟಿನ ಪಲ್ಯ ಮಾಡುವುದು. 'ಪತ್ರಡ್ಯೆ' ಮಾಡುವುದು. ಕೆಸುವಿನ ಎಲೆಯಿಂದ 'ತೇಟ್ಲ' (ಎಲೆಯನ್ನು ಸುರುಳಿ ಮಾಡಿಸಿ ಗಂಟು ಹಾಕುವುದು).



ಆ. ನುಗ್ಗೆ ಸೊಪ್ಪಿನ ಪಲ್ಯ ಇದಕ್ಕೆ ಹಲಸಿನ ಬೀಜ (ಬೋಲೆ ಪೆಲತರಿ)ಯನ್ನು ಮಿಶ್ರಣ ಮಾಡಿ ರುಚಿಯಾದ ಪಲ್ಯ ತಯಾರಿಸುವರು



ಇ. 'ತೊಜಂಕ್' (ತೊಗಟೆ ಸೊಪ್ಪು) ಸೊಪ್ಪಿನ ಪಲ್ಯ



ಈ. ಕಿರಾತಕಡ್ಡಿಯ ಕಷಾಯ ಬಹಳ ರುಚಿ. ಆದರೂ ದೇಹಾರೋಗ್ಯಕ್ಕೆ ಒಳ್ಳೆಯದು





ಉ. 'ಇಟ್ಟೆಯಿ' ಎಂಬ ಸಣ್ಣ ಗಿಡದ ಚಿಗುರಿನ ಮದ್ದು.

ಊ. ಮಣ್ಣಿನ ಮಂಡೆ (ಆವೆ ಮಣ್ಣಿನ ದೊಡ್ಡ ಗುಡಾನದ ತೆರನಾದ ಪಾತ್ರೆ)ಯಲ್ಲಿ ಉಪ್ಪು ನೀರು ತುಂಬಿಸಿ ಅದರಲ್ಲಿ ನೆನೆ ಹಾಕಿರುವ ಸರಿಯಾಗಿ ಉಪ್ಪು ಹೀರಿರುವ ಮಾವಿನಕಾಯಿ ಗೊಜ್ಜು ಮತ್ತು ಪಲ್ಯ.

ಋ. ಪೆಜಕಾಯಿ (ಹೆಬ್ಬಲಸಿನ ಕಾಯಿ)ಯ ಗೊಜ್ಜು ಮತ್ತು ಪಲ್ಯ ಬಲಿತ ಹಲಸಿನ ಕಾಯಿಯ ಒಳದಂಟು (ಗೂಂಜಿ)ವಿನ ಪಲ್ಯ.

ಎ. ಹಲಸಿನ ಕಾಯಿಯ ಸೋಳೆ (ಉಪ್ಪಡ್ ಪಚ್ಚಿರ್)ಯನ್ನು ಉಪ್ಪು ನೀರಿನಲ್ಲಿ ದಾಸ್ತೀಕರಿಸಿ ಅದರಿಂದ ತಯಾರಿಸುವ ಪಲ್ಯ.

ಏ. ಸಾಕಷ್ಟು ಬಲಿತಿರುವ ಮಾವಿನ ಮಿಡಿಯನ್ನು ಉಪ್ಪುನೀರಿನಲ್ಲಿ ನೆನೆ ಹಾಕಿ ಅದು ಸಾಕಷ್ಟು ಉಪ್ಪು ಹೀರಿದ ಬಳಿಕ ಮೆಣಸು ಮತ್ತಿತರ ಸಾಂಬಾರ ಜೀನಸುಗಳನ್ನು ಅರೆದು ರುಚಿ ಕಟ್ಟಾದ ಉಪ್ಪಿನಕಾಯಿ ತಯಾರಿಸುವರು.



ಐ. ಕರಂಡೆಕಾಯಿ, ನೆಲ್ಲಿಕಾಯಿ, ಅಮಟೆಕಾಯಿ, ಬಿಂಬುಳ, ಚಲ್ಲಂಗಾಯಿ (ಒಂದು ತೆರನಾದ ಅಂಟುಕಾಯಿ) ಮೊದಲಾದವುಗಳಂದ ತಯಾರಿಸಿದ ಉಪ್ಪಿನಂಕಾಯಿ.

ಒ. ಬಿದಿರಿನ ಎಳೆತಾದ ಮೊಳಕೆ, ಕಣಿಲೆಯ ಪಲ್ಯ ಅಥವಾ ಉಪ್ಕರಿ

ಓ. ಗೆಣಸಿನ ಹಪ್ಪಳ, ಮೆಣಸಿನ ಹಪ್ಪಳ, ಉದ್ದಿನ ಹಪ್ಪಳ, ಗೋಧಿಯ ಹಪ್ಪಳ, ರಾಗಿಯ ಹಪ್ಪಳ, ಹಲಸಿನ ಹಪ್ಪಳ, ವಿವಿಧ ಸಂಡಿಗೆಗಳು, ಗೆಣಸು ಕತ್ತರಿಸಿ ಬೇಯಿಸಿ, ಒಣಗಿಸಿರುವ ಹೋಳುಗಳು, ಗೆಣಸಿನ 'ಬಾಲ್ಗ' ಹಲಸಿನ ಹಣ್ಣಿನ ಬೀಜ, ಹುಣಸೆ ಬೀಜ ಹೊಂದಿರುವುದು, ಹೆಬ್ಬಲಸಿನ ಹಣ್ಣಿನ ಬೀಜ, ಪೆಜಕೊಡೆ ಹುರಿದಿರುವುದು ಮೊದಲಾಗಿ

ಔ. ಸನ್ಯಾಸಿ ಕಂಡೆ (ಗಡ್ಡೆ)ಯ ಗಂಜಿ, ಸಾಸಿವೆ ಗಂಜಿ, ಅತ್ತಿಮರದ ತೊಗಟೆ ಅರೆದು ಅಕ್ಕಿಯ ಒಟ್ಟಿಗೆ ಬೇಯಿಸುವ ಗಂಜಿ, ಮೆಂತೆ ಗಂಜಿ, ಇರ್ಪೆ ಮರದ ಕೆತ್ತೆಯ ಗಂಜಿ.

ಕ ಹುರುಳಿ ಮತ್ತು ರಾಗಿಯನ್ನು ಅರೆದು ಕುಚಲಕ್ಕಿಯ ಜೊತೆ ಬೇಯಿಸುವುದು. ಕೂಡು ಕುಟುಂಬದ ಪ್ರಧಾನವಾದ ಮನೆತನಗಳಲ್ಲಿ ಒಂದು ಹೊತ್ತಿಗೆ ಒಂದೆರಡು ದೊಡ್ಡ ಮಣ್ಣಿನ 'ಗುಕ್ಕಿ'(ಗುಡಾಣ) ಗಳಲ್ಲಿ ತಯಾರಿಸಿದ ಗಂಜಿ ಮನೆ ಮಂದಿಗೆ ಗೇಯುವ ಶಕ್ತಿಯನ್ನು ವೃದ್ಧಿಸುವುದು. ಇದು ತುಳುನಾಡಿಗೆ ಮಾತ್ರ ಸೀಮಿತವಾಗಿರುವುದು ವಿಶೇಷ. 'ಒಲ್ಲೆಕೊಡಿ' (ಒಂದು ಔಷಧೀಯ ಸಸ್ಯದ ಚಿಗುರು)ಯ ಕಷಾಯ ಜಾರಿಗೆ ಹಣ್ಣಿನ ಸಿಪ್ಪೆಯ ಪಲ್ಯದ ಹುರುಳಿ ಬೇಯಿಸುದ ನೀರಿನ ಸಾರು (ಆಟಿ ಸೋಣ ಬನ್ನಂಜೆ ಬಾಬು ಅಮೀನ್ 7-8)

## ಆ. <u>ಆಟಿ ಅಮಾವಸ್ಯೆಯ ಮದ್ದು :-</u>

ಹಲವು ವಿಧಿನಿಯಮಗಳು ಸಾಂಸ್ಕೃತಿಕ ಧಾರ್ಮಿಕ ಕಟ್ಟುಕಟ್ಟಳೆಗಳು ಸಾಂಪ್ರಾದಾಯಿಕ ನಂಬಿಕೆಗಳನ್ನೊಳಗೊಂಡಿರುವ 'ಆಟಿ' ಆಚರಣೆಯಲ್ಲಿ ಅಮಾವಾಸ್ಯೆ ಮದ್ದು (ಹಾಲೆರಸ) ಕುಡಿಯುವುದು ಒಂದು ಅತಿಮುಖ್ಯ ಆಹಾರ ಪದ್ಧತಿ. ಆಟಿ ಅಮಾವಸ್ಯೆಯ ದಿನ ಹಾಲೆಮರದಲ್ಲಿ ಸಾವಿರಾರು ಔಷಧೀಯ ಗುಣಗಳು ಸೇರಿಕೊಂಡಿರುವುದು ಎಂದು ತುಳುವರು ನಂಬುವರು.

ಹಾಲೆಮರವು ಎತ್ತರಕ್ಕೆ ಸದೃಢವಾಗಿ ಬೆಳೆಯುವ ಮರ. ತುಳುವರ ಆಚರಣೆಯಂತೆ ಆಟಿ ಅಮಾವಸ್ಯೆಯಂದು ಬೆಳಗೆದ್ದು ಎಲ್ಲ ವರ್ಗದ ತುಳುವರು 'ಪಾಲೆದ ಕೆತ್ತೆದ ಮರ್ದ್' (ಹಾಲೆ ಮರದ ತೊಗಟೆಯಿಂದ ತೆಗೆದ ರಸ) ಕುಡಿಯುವುದು ಕಡ್ಡಾಯವಾಗಿದೆ. ಆಟಿ ಅಮಾವಸ್ಯೆಯ ದಿನ ಹಾಲೆ ಮರದಲ್ಲಿ ಸಾವಿರಾರು ಔಷಧೀಯ ಗುಣಗಳು ಸೇರಿಕೊಂಡಿರುವುವು.

ನೈಸರ್ಗಿಕವಾಗಿ ಔಷಧಿಯನ್ನು ಪಡೆಯುವಲ್ಲಿ ತುಳುವರು ಮಾಡಿರುವ ಈ ಆಚರಣೆಯ ಕಟ್ಟು ಕಟ್ಟಳೆಗಳು ಪ್ರಶಂಸನೀಯ. ಆಟಿ ಅಮಾವಸ್ಯೆಯಂದು ಬೆಳಗ್ಗೆ ಬರಿ ಹೊಟ್ಟೆಗೆ 'ಪಾಲೆ' (ಹಾಲೆ) ಮರದ ರಸವನ್ನು ಕುಡಿದರೆ ಆ ವರ್ಷದುದ್ದಕ್ಕೂ ಯಾವ ಕಾಯಿಲೆಗಳು ಬರುವುದಿಲ್ಲ. ಅಮಾವಸ್ಯೆಯ ಮೊದಲ ರಾತ್ರಿಯಂದು ಬೇರೆ ಬೇರೆ ಹಾವು ಪಕ್ಷಿಗಳು ಬಂದು ಮರದಲ್ಲಿ ನೆಲೆಸಿರುತ್ತವೆ. ಇದರಿಂದ ಹಲವು ರೀತಿಯ ಔಷಧೀಯ ಗುಣಗಳು ಹಾಲೆ ಮರದಲ್ಲಿ

ಕೂಡಿಕೊಳ್ಳುತ್ತವೆ. ಅತಿ ಮುಖ್ಯವಾದ ಅಂಶವೆಂದರೆ 'ಬೊಲ್ಲ್‌ಕಲ್ಲ್' ನಿಂದ ಬೆಣಚು ಕಲ್ಲಿನಿಂದ ಜಜ್ಜಿ ಇಲ್ಲವೆ ಹೆಲ್ಲುಗಳಿಂದ ಮರದ ತೊಗಟೆಯನ್ನು ಕಿತ್ತು ತೆಗೆಯಬೇಕು. ಬೇರಾವುದೇ ಕಬ್ಬಿಣದ ಸಾಧನಗಳಿಂದ ಅದನ್ನು ತೆಗೆಯಬಾರದು ಎಂಬುವ ವಿಧಿ ನಿಷೇಧವಿದೆ. ಕಬ್ಬಿಣದ ಯಾವುದೇ ಸಾಧನವನ್ನು ಉಪಯೋಗಿಸಿದಲ್ಲಿ ಆ ಮದ್ದು ಮದ್ದಾಗದೇ ವಿಷವಾಗಿ ಪರಿಣಮಿಸುವುದು. ಬೆಣಚುಕಲ್ಲನ್ನು ಕೆಂಡದಲ್ಲಿ ಬಿಸಿ ಮಾಡಿ ಹಾಲೆರಸದಲ್ಲಿ ಮುಳುಗಿಸಿದ ನಂತರ ಆ ಮದ್ದನ್ನು ಕುಡಿಯಬೇಕು. "ಅಮಾವಸ್ಯೆಯ ಹಿಂದಿನ ದಿನ ಸಂಜೆ ಗುಡ್ಡಕ್ಕೆ ಹೋಗಿ ಹಾಲೆ ಮರವನ್ನು ಹುಡುಕಿ ಮರ ಸಿಕ್ಕಿದ ಬಳಿಕ, ಅದರ ಬುಡದಲ್ಲಿ ವೀಳ್ಯದೆಲೆ ತಾಂಬೂಲ ಇಟ್ಟು ಕೈಮುಗಿದು, 'ನಾನು ನಾಳೆ ಬರುತ್ತೇನೆ, ಎಲ್ಲ ರೀತಿಯ ಮದ್ದಿನ ಗುಣಗಳು ನಿನ್ನಲ್ಲಿ ಸೇರಲಿ' ಎಂದು ಕೈಮುಗಿದು ಬರಬೇಕು" (ತು.ಸಂ.ಪೊ-ಪಾ.ರಾ. ಆಚಾರ್ 45).





ಹಾಲೆಮರದ ತೊಗಟೆಯನ್ನು ತರುವವರು ಬೆತ್ತಲೆಯಾಗಿದ್ದು ಅದನ್ನು ತರಬೇಕೆಂಬುದು ರೂಢಿ. ಶ್ರೀಯುತ ಚಂದ್ರಹಾಸ್ ರೈ ರವರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಕುರಿತು ಈ ರೀತಿಯಾಗಿ ಹೇಳಿದ್ದಾರೆ. "ನಗ್ನವಾಗಿಯೇ ಹಾಲೆ ಮರದ ತೊಗಟೆಯನ್ನು ತರಬೇಕು ಎನ್ನುವುದರ ಹಿನ್ನೆಲೆ ಹಾಗೂ ಬುದ್ಧಿವಂತಿಕೆ ಹೇಗಿದೆಯೆಂದರೆ ನಗ್ನವಾಗಿಯೇ ಅದನ್ನು ತೆಗೆಯಬೇಕೆಂದು ಆದಲ್ಲಿ ಹಾಲೆ ಮರದ ತೊಗಟೆಯನ್ನು ತರುವವನು ಎಲ್ಲರೂ ಏಳುವ ಮೊದಲೇ ಯಾರಿಗೂ ಕಾಣದಂತೆ ನಗ್ನವಾಗಿ ಹೋಗಿ ಬರುತ್ತಾನೆ. ಅತಿ ಬೇಗನೆ ಹೋಗ ಬೇಕೆನ್ನುವುದರ ಹಿಂದಿರುವ ವೈಜ್ಞಾನಿಕ ಕಾರಣವೆಂದರೆ ಮುಖ್ಯವಾಗಿ ಹಾಲು ಬರುವಂತ ಮರಗಳಾದ ಹಾಲೆ, ರಬ್ಬರ್‌ಗಳಲ್ಲಿ ಸೂರ್ಯನ ಕಿರಣಗಳು ಭೂಮಿಯ ಸ್ಪರ್ಶ ಮಾಡುವುದಕ್ಕೂ ಮುನ್ನ ಅದರಿಂದ ದೊರೆಯುವ ಹಾಲು ಮೃದುವಾಗಿದ್ದು ಗರಿಷ್ಠ ಮಟ್ಟದಲ್ಲಿ ಹಾಲು ದೊರೆಯುತ್ತದೆ. ಅದೇ ರೀತಿ ತೊಗಟೆಯು ತೆಗೆಯಲು ಸುಲಭದಾಯಕವಾಗಬಹುದು. ಸೂರ್ಯನ ಬೆಳಕು ಬಿದ್ದ ನಂತರದಲ್ಲಿ ಅದರ ಹಾಲು ಗಟ್ಟಿಯಾಗಿದ್ದು ಔಷಧಿದಾಯಕವಾಗಿರುವುದಿಲ್ಲವೆನ್ನುವ ಕಾರಣಕ್ಕೆ ಹಾಲೆ ಮರದ ತೊಗಟೆಯನ್ನು ಚೆನ್ನಾಗಿ ಗುದ್ದಿ ರಸ ತೆಗೆಯುವರು. ಅದಕ್ಕೆ ಕರಿಮೆಣಸು, ಜೀರಿಗೆ, ಓಮ, ಬೆಳ್ಳುಳ್ಳಿ ಇವಿಷ್ಟನ್ನು ಹಾಕಿ ಅರೆದು ಮಿಶ್ರಣ ಮಾಡಿ (ಬೋರ್ಗಲ್) ಬೆಣಚು ಕಲ್ಲನ್ನು ಕಾಯಿಸಿ ಒಗ್ಗರಣೆ ಕೊಡುವುದು, ಬಳಿಕ ಅದನ್ನು ಮನೆತನದ ಅಳಿದ ಹಿರಿಯರ ಪ್ರೀತ್ಯರ್ಥವಾಗಿ

ಅಡ್ಡದೀಪಿನಿ (ಮರೆಯಲ್ಲಿ ಇಡುವುದು) ಮಾಡುವರು. ಅತ್ಯಂತ ಕಹಿಯಾಗಿದ್ದರೂ ಬೆತ್ತದ ಕೋಲಿನ ಹೊಡೆತದ ಭಯಕ್ಕಾದರೂ ಮಕ್ಕಳು ಕೂಡಾ ಈ ಮದ್ದನ್ನು ಕುಡಿಯುತ್ತಿದ್ದರು. ಈ ಮದ್ದು ಕುಡಿದರೆ ಮಕ್ಕಳಿಗೆ ವರ್ಷಪೂರ್ತಿ ಮದ್ದು ಕೊಡುವ ಅಗತ್ಯವಿಲ್ಲ. ಮತ್ತು ಹುಳಬಾಧೆಗೂ ಇದು ಶ್ರೇಷ್ಠ ಔಷಧವೂ ಹೌದು. ಈ ಕಷಾಯ ಉಷ್ಣವಾಗಿದ್ದರಿಂದ ಈ ಕಷಾಯವನ್ನು ಸೇವಿಸಿದ ಬಳಿಕ ತಂಪಾಗಲು ಮೆತ್ತೆಗಂಜಿಯನ್ನು ನೀಡುವರು. ಹೊಟ್ಟೆಯೊಳಗಿನ ಆಹಾರದೊಳಗೆ ಕೂದಲು ಸೇರಿಕೊಂಡಿದ್ದರೆ ಈ ಕಷಾಯದಿಂದ ದೂರಹೋಗುವುದು. ಹಾಲೆ ಮರದ ತೊಗಟೆಯನ್ನು ನಗ್ನವಾಗಿ ಹೋಗಿ ತರಬೇಕೆಂಬುದರ ಹಿಂದಿರುವ ಧಾರ್ಮಿಕ ನಂಬಿಕೆ ಎಂದರೆ ನಗ್ನತೆಗೆ ದುಷ್ಟಶಕ್ತಿಗಳು ಕಾಡಿಗೆ ಹೋಗುವಾಗ ಮಾಯೆಯಲ್ಲಿರುವ ದುಷ್ಟಶಕ್ತಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವ ನೆಲೆಯಲ್ಲಿ ಈ ಕ್ರಮ ಹುಟ್ಟಿಕೊಂಡಿರಬೇಕೆಂದು ಹೇಳಬಹುದಾಗಿದೆ. ಅದೂ ಅಮಾವಸ್ಯೆ ದಿನಗಳಲ್ಲಿ ಪಿಶಾಚಿಗಳು ಹೆಚ್ಚಾಗಿ ಓಡಾಡುತ್ತವೆ ಎಂಬ ಇನ್ನಷ್ಟು ಪುಷ್ಟೀಕರಿಸುತ್ತದೆ. ಬೆಣಚು ಕಲ್ಲಿನಿಂದ ಹಾಲೆರಸಕ್ಕೆ ಒಗ್ಗರನೆ ಕೊಡುವುರಿಂದ ಹಾಲೆರಸದಲ್ಲಿರುವ ರೋಗಕಾರಕ ಬ್ಯಾಕ್ಟೀರಿಯಾಗಳು ನಾಶವಾಗುತ್ತವೆ ಎಂಬ ಅಂಶ ಹಾಗೂ ಬೆಣಚು ಕಲ್ಲಿನಲ್ಲಿ ರೋಗ ನಿರೋಧಕತೆಯು ಅಡಗಿದೆ. ಜನಪದರು ತಮಗೆ ಪ್ರಕೃತಿ ಸಹಜವಾದ ಕಾಲ ವ್ಯತ್ಯಯದಿಂದ ರೋಗಬಾಧೆ ಮೊದಲಾದ ತೊಂದರೆಗಳಿಗೆ ಪ್ರಕೃತಿಯ ಗರ್ಭದಿಂದಲೇ ಔಷಧಿಗಳಲ್ಲಿ ಕಂಡುಕೊಳ್ಳುವುದು ವೇದ್ಯವಾಗುತ್ತದೆ. ಹಾಗಾಗಿ "ವರ್ಷಕ್ಕೊಮ್ಮೆ ಹೀಗೆ ಈ ಮದ್ದಿನ ಸೇವನೆ ಮಾಡುವುದು ಒಂದು ವಿಧದ ಪ್ರಕೃತಿ ಚಿಕಿತ್ಸೆಯೂ ಹೌದು. ರೋಗ ನಿರೋಧಕ ಶಕ್ತಿಯನ್ನು ಹೆಚ್ಚಿಸುವುದಕ್ಕೆ ಮುಂದಿನ ತಿಂಗಳು ಆಚರಿಸಲ್ಪಡುವ ಹಬ್ಬದ ವಿಶೇಷ ಅಡುಗೆ ಪದಾರ್ಥ ಸೇವಿಸಿ ಜೀರ್ಣಿಸಿಕೊಳ್ಳುವುದಕ್ಕೆ ಬೇಕಾದ ಸಿದ್ಧತೆಯೂ ಹೌದು. (ಜನಪದ ಸುತ್ತಮುತ್ತ – ವಾಮನ ನಂದಾವರ ಪು.ಸಂ 21) ಎನ್ನುವ ವಿದ್ವಾಂಸರ ಮಾತು ಸತ್ಯವಾದದ್ದು. ಕಾರಣವೇನೆಂದರೆ ಆಟಿ ತಿಂಗಳಿನ ನಂತರದಲ್ಲಿ ಬರುವ ಸೋಣ ತಿಂಗಳಿನಲ್ಲಿ ಹಬ್ಬಗಳೇ ತುಂಬಿರುತ್ತದೆ ಮತ್ತು ಕುರಲ್ ಪರ್ಬ, ಪುದ್ಯಾರ್ ಇತ್ಯಾದಿ ಹಬ್ಬಹರಿದಿನಗಳ ಆಚರಣೆಗಳಿರುತ್ತವೆ. ಈ ನಿಟ್ಟಿನಲ್ಲಿ ವಿದ್ವಾಸ್ಮರರು ಹೇಳಿರುವ ಮಾತು ಸತ್ಯದ ಕಡೆಗೆ ಬೆಳಕು ವಿದ್ವಾಂಸರು ಹೇಳಿರುವ ಮಾತು ಸತ್ಯದ ಕಡೆಗೆ ಬೆಳಕು ಚೆಲ್ಲುತ್ತದೆ.



ಮುಖ್ಯವಾಗಿ 'ದೀಪಾವಳಿ' ಹಬ್ಬದ ಸಮಯದಲ್ಲಿ 'ಬಲಿಪಾಡ್ಯಮಿ'ಯಂದು ಭೂಮಿಪುತ್ರ 'ಬಲಿಯೇಂದ್ರ'ನನ್ನು ಭೂಮಿಗೆ ಬರಮಾಡಿಕೊಳ್ಳುವ ಕ್ರಿಯಾಚರಣೆಯಲ್ಲಿ ಅಂಗಳದಲ್ಲಿ 'ಪಾಲೆ' (ಹಾಲೆ) ಮರವನ್ನು ನೆಟ್ಟು ಈ ಮೂಲಕ ಅಲ್ಲಿ 'ಬಲಿಯೇಂದ್ರ'ನನ್ನು ಪೂಜಿಸುವುದು ವಿಶಿಷ್ಟವಾಗಿದೆ. ಅಲ್ಲಿ ಈ 'ಪಾಲೆ' (ಹಾಲೆ)ಮರವನ್ನು 'ಬಿಲಕ್ಕಿ ಮರ' ಎಂದೂ ಕರೆಯುತ್ತಾರೆ. ಈ 'ಪಾಲೆ' (ಹಾಲೆ) ಮರವನ್ನು 'ಬಲಿಯೇಂದ್ರ' ಎಂದೂ ಕರೆಯುತ್ತಾರೆ

ಎಂದು ವಿದ್ವಾಂಸರು ಹೇಳುತ್ತಾರೆ. ಸುಗ್ಗಿ ಬೆಳೆಯ ಹೊತ್ತಿಗೆ ನಡೆಯುವ ಈ ಕ್ರಿಯಾಚಾರಣೆಯಲ್ಲಿ 'ಹಾಲಿನ ಮರ' ಎಂದು ಗುರುತಿಸುವ 'ಪಾಲೆ' (ಹಾಲೆ) ಮರ ಸಮೃದ್ಧಿಯ ಸಂಕೇತವಾಗುತ್ತದೆ. ಹಾಲು ಸುರಿಸುವ ಕಾರಣದಿಂದ ಸಮೃದ್ಧಿಯ ಅರ್ಥದಲ್ಲಿ ಸಂಸ್ಕೃತಿಯ ಗ್ರಹಿಕೆಯಲ್ಲಿ ಈ ಮರ ವಿಶಿಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ವಿದ್ವಾಂಸರು ನೀಡುವ ಈ ತಾತ್ವಿಕ ವಿಶ್ಲೇಷಣೆಯನ್ನು ವಿಶೇಷವಾಗಿ ಲಕ್ಷಿಸಬಹುದು. "ಆರೋಗ್ಯ ಸಂರಕ್ಷಣೆಯ ಮದ್ದು ಕುಡಿಯುವ ಆಟಿ ಅಮಾವಸ್ಯೆಯ ಕತ್ತಲೆ ಕಳೆದು ಬೆಳಕು ಮೂಡುವ ಸಂಧಿಕಾಲದಲ್ಲಿ ಈ ಮರ ಅಸಾಮಾನ್ಯವಾಗುತ್ತದೆ. ಮಾಂತ್ರಿಕ ಶಕ್ತಿಯನ್ನು ಒದಗಿಸುತ್ತದೆ. ಈ ಬಗೆಯ ಮಾಂತ್ರಿಕ ಪರಿವರ್ತನೆಗೆ ನಿಸರ್ಗದ ವಿಶಿಷ್ಟಾಂಶಗಳು ಕಾರ್ಣವಾಗುತ್ತವೆ ಎಂಬ ಮಾತನ್ನು ನಿಸರ್ಗ ನಿಯಮದ ದೃಷ್ಟಿಯಿಂದ ಮತ್ತು ಜನಪದರ ನಂಬಿಕೆಯ ದೃಷ್ಟಿಯಿಂದ ನೋಡಬಹುದು. ಒಟ್ಟಿನಲ್ಲಿ ಸಂಸ್ಕೃತದಲ್ಲಿ 'ಸಪ್ತಪರ್ಣಿ' ಎಂದು ಕರೆಯಲಾಗುವ 'ಪಾಲೆ' (ಹಾಲೆ) ಮರ ತುಳುನಾಡಿನಲ್ಲಿ ಸಂಬಂಧಿಸಿದಂತೆ ಧಾರ್ಮಿಕ ಪಾವಿತ್ರ್ಯವುಳ್ಳ ಮತ್ತು ಔಷಧೀಯ ಗುಣದ ಮರವಾಗಿದೆ. ಇದನ್ನು ಕಾಲ ಮತ್ತು ದೇಶದ ಸಂದರ್ಭದಲ್ಲಿಟ್ಟು ವಿದ್ವಾಂಸರುಗಳು ವಿಶ್ಲೇಷಿಸಿರುವುದು ಸಮಂಜಸವಾಗಿದೆ. ಔಷಧೀಯ ಗುಣಗಳನ್ನು ಹೊಂದಿರುವ ಈ ಮರವನ್ನು ಸಸ್ಯಶಾಸ್ತ್ರಜ್ಞರು 'ಅಲ್‌ಸ್ಟೋನಿಯಾ ಸ್ಕ್ಯಾಲರೀಸ್' ಎಂದು ಹೆಸರಿಸಿದ್ದಾರೆ.

ಹಾಲೆಮರದ ರಸ ಕುಡಿಯುವ ದಿನದ ವಿಶೇಷತೆಯೆಂದರೆ ಆ ಮರದ ತೊಗಟೆಯಲ್ಲಿ ಎಷ್ಟೇ ರೋಗ ನಿರೋಧಕ ಶಕ್ತಿಯಿದ್ದರೂ ಅದು ಕುಡಿಯಲು ಯೋಗ್ಯವಾಗುವುದು ಆಟಿ ಅಮಾವಸ್ಯೆಯಂದು ಮಾತ್ರ ಎಂಬ ನಂಬಿಕೆ ತುಳುವರಲ್ಲಿರುವುದು. 'ಪಾಲೆದ ಕೆತ್ತೆದ ಕೈಪೆಗ್ ಓಲೆಬೆಲ್ಲದ ಚೀಪೆ' (ಹಾಲೆ ರಸದ ಕಹಿಗೆ ಓಲೆ ಬೆಲ್ಲದ ಸಿಹಿ) ಎಂಬ ಗಾದೆಯಂತೆ ಕಹಿಯಾಗಿರುವ ಹಾಲೆರಸ ಕುಡಿದು ಓಲೆಬೆಲ್ಲ ಸವಿಯುತ್ತಾರೆ. "ನಾಲಗೆಗೆ ಸಿಹಿ ಹಾಗೂ ರುಚಿ ಎನಿಸುವ ತಿನಿಸುಗಳು ಹೊಟ್ಟೆಗೆ ಒಳ್ಳೆಯದಲ್ಲ. ನಾಲಗೆಗೆ ಕಹಿಯೆನಿಸಿದ್ದರೂ ಆ ತಿನಿಸುಗಳು ಹೊಟ್ಟೆಗೆ ದೇಹಕ್ಕೆ ಒಳ್ಳೆಯದು" ಎನ್ನುವ ಮಾತನ್ನು ಹಿರಿಯರೊಬ್ಬರು ಹೇಳಿದ ನೆನಪು ಬಹುಶಃ ಈ ಮಾತಿಗೆ ಹಾಲೆರಸವೇ ಒಂದು ಉತ್ತಮ ಉದಾಹರಣೆ ಎಂದರೆ ತಪ್ಪಾಗಲಾರದು.

ಆಟಿ ಅಮಾವಸ್ಯೆಯ ಹಾಲೆ ಕಷಾಯದ ಕುರಿತಾಗಿ ಪತ್ರಿಕೆಗಳಲ್ಲಿ ಬಂದಂತಹ ಲೇಖನ ಕುರಿತ ಒಂದು ನೋಟ ಹೀಗಿದೆ.

ಡಾ। ಹರಿಪ್ರಸಾದ್ ಸುವರ್ಣ, ಸುವರ್ಣ ಕ್ಲಿನಿಕ್ ಮಂಗಳೂರು ಇವರು ಆಟಿ ಅಮಾವಸ್ಯೆಯ ಹಾಲೆ ಕಷಾಯಕ್ಕೆ ರೆಡಿಯಾಗಿ ಎಂಬ ಶೀರ್ಷಿಕೆಯಾಗಿರುವ ಲೇಖನದಲ್ಲಿ ಆಟಿಯ ಕುರಿತಾದ ಪೀಠಿಕೆಯ ನಂತರ ವಾತವರಣ ಒಮ್ಮಿಂದೊಮ್ಮೆಲೆ ಉಂಟಾಗುವ ಬದಲಾವಣೆಗಳು ಮನುಷ್ಯನ ದೇಹದಲ್ಲಿ ಕೆಲವು ವ್ಯತ್ಯಯ ಉಂಟು ಮಾಡುತ್ತದೆ.

ಶರೀರದ ರೋಗ ನಿರೋಧಕ ಶಕ್ತಿಯು ಬದಲಾದ ಪರಿಸರಕ್ಕೆ ಹೊಂದಿಕೊಂಡು ಬಲಯುತವಾಗುವ ಮೊದಲು ಶೀತ ಜ್ವರ, ಕೆಮ್ಮು, ಅಜೀರ್ಣ, ವಾಂತಿ ಭೇದಿ ಮೊದಲಾದ ರೋಗಗಳು ದೇಹವನ್ನು ಪೀಡಿಸುವುದು ಸಾಮಾನ್ಯ. ಈ ರೀತಿ ವಾತಾವರಣದಲ್ಲಿ ಉಂಟಾಗುವ ವ್ಯತ್ಯಯ ಹಾಗೂ ತತ್ಸಂಬಂಧಿ ಶರೀರವನ್ನು ಬಾಧಿಸುವ

ಪ್ರಕ್ರಿಯೆ ನಮ್ಮಲ್ಲಿ ಕಂಡುಬರುವುದರಿಂದ ಜನರು ಅದರ ದುಷ್ಪರಿಣಾಮ ತಡೆಯಲು ಹಾಲೆ ಮರದ ಕಷಾಯವನ್ನು ಕರಿಮೆಣಸು, ಬೆಳ್ಳುಳ್ಳಿ, ಓಮ ಸೇರಿಸಿ ಆಟಿ ತಿಂಗಳ ಅಮಾವಸ್ಯೆಯ ಅಂದರೆ ಜುಲೈ ತಿಂಗಳನಲ್ಲಿ ನಸುಕಿನಲ್ಲಿ ಖಾಲಿ ಹೊಟ್ಟೆಯಲ್ಲಿ ಸೇವಿಸುವ ರೂಢಿ ಅನಾದಿಕಾಲದಿಂದಲೂ ಅನುಸರಿಸಿಕೊಂಡು ಬಂದಿರುತ್ತಾರೆ. ಈ ಕಷಾಯದ ಔಷಧೀಯ ಉಪಯೋಗದಿಂದ ಇದು ಜಾನಪದ ಔಷಧಗಳ ಪಟ್ಟಿಯಲ್ಲಿ ಅಗ್ರಸ್ಥಾನದಲ್ಲಿದೆ. ಈ ಆಯುರ್ವೇದ ಕಷಾಯ ಕಲ್ಪನಾ ವಿಧಾನವನ್ನುಸರಿಸಿ ತಯಾರಿಸಿದ ಈ ಕಷಾಯವನ್ನು ಚಿಕ್ಕ ಮಕ್ಕಳಿಂದ ಹಿಡಿದು ಎಲ್ಲಾ ವಯೋಮಾನದವರಿಗೂ, ಗರ್ಭಿಣಿಯರಿಗೂ, ಬಾಣಂತಿಯರಿಗೂ ಉತ್ತಮ ಪರಿಣಾಮವನ್ನುಂಟು ಮಾಡುತ್ತದೆ. ಆರೋಗ್ಯ ಕಾಪಾಡುವ ದೃಷ್ಟಿಯಿಂದ ಈ ಕಷಾಯವನ್ನು ಆಟಿ ಅಮಾವಸ್ಯೆ ಮಾತ್ರವಲ್ಲದೆ ಉಳಿದ ಸಮಯದಲ್ಲೂ ಸೇವಿಸಬಹುದು. ಇದು ದೇಹದಲ್ಲಿ ಅತೀ ಶೀಘ್ರವಾಗಿ ಶೀತ ವಾತಾವರಣವನ್ನುಂಟು ಮಾಡುತ್ತದೆ. ಆರೋಗ್ಯ ಕಾಪಾಡುವ ದೃಷ್ಟಿಯಿಂದ ಈ ಕಷಾಯವನ್ನು ಆಟಿ ಅಮಾವಸ್ಯೆ ಮಾತ್ರವಲ್ಲದೇ ಉಳಿದ ಸಮಯದಲ್ಲಿ ಸೇವಿಸಬಹುದು. ಇದು ದೇಹ ಅತೀ ಶೀಘ್ರವಾಗಿ ಶೀತ ವಾತವರಣವನ್ನು ತಡೆದುಕೊಳ್ಳುವ ಶಕ್ತಿಯನ್ನು ಹೆಚ್ಚಿಸುತ್ತದೆ. ಜೊತೆಗೆ ಹುಳ ಬಾಧೆಯಿಂದ ಜೀರ್ಣಾಂಗವ್ಯೂಹವನ್ನು ಶುದ್ಧಗೊಳಿಸುತ್ತದೆ. ಆಹಾರದ ಪಚನಕ್ರಿಯೆಯನ್ನು ಉತ್ತಮ ಪಡಿಸಿ ದೇಹದ ರೋಗನಿರೋಧಕ ಶಕ್ತಿಯನ್ನು ವೃದ್ಧಿಸುತ್ತದೆ" ಎಂಬುದರ ಕುರಿತು ಬರೆದಿದ್ದಾರೆ. (ವಿಜಯ ಕರ್ನಾಟಕ – ವಿಜ್ಞಾನ ವಿಜಯ ಮಂಗಳವಾರ 17 ಜುಲೈ 2012)

ಹೀಗೆ ಹಾಲೆರಸದ ಔಷಧೀಯ ಗುಣದ ಕುರಿತಗಿ ಸಮಂಜಸವಾದ ವಿಶ್ಲೇಷಣೆ ನೀಡಬಹುದು ಹಾಗೂ ತುಳುವರ ಬದುಕು ಹೇಗೆ ನಂಬಿಕೆ – ಆಚರಣೆಗಳ ಮೂಲಕ ಸಂಪನ್ನಗೊಂಡಿದೆ ಎಂಬುದನ್ನು ಅರ್ಥೈಸಿಕೊಳ್ಳಬಹುದು.

ತಾನು ಗಂಡುವೇಷದಲ್ಲಿರುವ ಹೆಂಗಸು ಎಂಬುದನ್ನು ಶತ್ರುಗಳಿಗೆ ತಿಳಿಸುವುದಕ್ಕಾಗಿ ನಗ್ನಳಾಗಿ ನಿಲ್ಲುವ ಸಾಹಸಿ ಹುಡುಗಿಯ ಕಥೆ ಪ್ಯೂಬೊ ಇಂಡಿಯನ್ನರಲ್ಲಿ ಪ್ರಚಲಿತದಲ್ಲಿದೆ. ದುಷ್ಟಶಕ್ತಿಗಳು ನಗ್ನತೆಗೆ ಹೆದರುತ್ತವೆ ಎಂಬ ನಂಬಿಕೆ ಈ ಕಥೆಯನ್ನು ಸಂಬಂಧಿಸಬಹುದು ಎಂಬ ಈ ವಿಶ್ಲೇಷಣೆ ಸ್ವಾರಸ್ಯಕರವಾಗಿದೆ. ಈ ಮೂಲಕ ಆಟಿ ಅಮಾವಸ್ಯೆ ದಿನ ಬೆಳಗ್ಗೆ 'ಪಾಲೆ' (ಹಾಲೆ) ಮರದ ತೊಗಟೆ ತರಲು ಹೋಗುವ ವ್ಯಕ್ತಿ ಬೆತ್ತಲೆಯಾಗಿ ಹೋಗುವುದರ ಔಚಿತ್ಯವನ್ನು ಅರ್ಥಮಾಡಿಕೊಳ್ಳಬಹುದು. ಹಾಗೆಯೇ ಇಷ್ಟಾರ್ಥ ಸಿದ್ಧಿಗಾಗಿ 'ಬೆತ್ತಲ ಸೇವೆ' ಆಚರಣೆಗಳನ್ನು ಮಾಡುವುದು ಸಮಾಜದಲ್ಲಿ ಕಂಡುಬರುತ್ತದೆ. ಉದಾಹರಣೆಗೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಚಂದ್ರಗುತ್ತಿಯ ರೇಣುಕಾಂಬೆಗೆ ಪ್ರತಿವರ್ಷ ಶಿವರಾತ್ರಿ ಮುಗಿದು ಒಂಭತ್ತನೇ ದಿನ ಅಸಂಖ್ಯಾತ ಭಕ್ತರು 'ಬೆತ್ತಲ ಸೇವೆ' ಸಲ್ಲಿಸುವುದು ರೂಢಿಯಲ್ಲಿದೆಯೆಂದು ಹೇಳಲಾಗುತ್ತದೆ. ಇನ್ನು ಪಾಲೆ (ಹಾಲೆ)ರಸಕ್ಕೆ ಬೆಣಚು ಕಲ್ಲನ್ನು ಬಿಸಿಮಾಡಿ ಒಗ್ಗರಣೆ ಕೊಡುವ ವಿಚಾರವನ್ನು ಪರಿಶೀಲಿಸಿದಾಗ ತಿಳಿಯುವುದೇನೆಂದರೆ, ಹಾಗೆ ಮಾಡುವುದರಿಂದ ಆ ಹಸಿ ಹಸಿ ಹಾಲೆರಸದಲ್ಲಿ ಇರಬಹುದಾದ ರೋಗಕಾರಕ ಬ್ಯಾಕ್ಟೀರಿಯಾಗಳು ನಾಶವಾಗುತ್ತವೆ. ಅಂದರೆ ಬೆಣಚು ಕಲ್ಲಿನಲ್ಲಿ ವಿಶೇಷವಾಗಿ ರೋಗನಿರೋಧಕ ಗುಣವಿದೆಯೆಂದು ಹೇಳಲಾಗುತ್ತದೆ.

ಹಾಲೆರಸವು ದೇಹಕ್ಕೆ ಉಷ್ಣವಾಗಿರುವುದರಿಂಹ ಆಟಿ ಅಮಾವಸ್ಯೆಯ ಮುಂಜಾನೆ ಹಾಲೆರಸದ ಮದ್ದು ಕುಡಿದ ಬಳಿಕದಲ್ಲಿ ಮೆಂತೆಗಂಜಿ ಉಣ್ಣುವುದು ರೂಢಿ ಔಷಧಿಯಾಗಿ ದೇಹಕ್ಕೆ ತಂಪನ್ನು ನೀಡುತ್ತದೆ

ಡಾ। ರಾಜಶ್ರೀಯವರ ಆಟಿ ತಿಂಗಳು ಅನಿಷ್ಟದ ತಿಂಗಳು; ಪ್ರಾಣಿ, ಪಕ್ಷಿ, ಮನುಷ್ಯರಿಗೆ ರೋಗ ಬಾಧೆ ತಟ್ಟುತ್ತದೆ ಎಂಬ ವಿಷಯಕ್ಕೆ ಪೂರಕವಾಗಿ 'ಆಟಿಕಳೆಂಜ'ನ ಹಾಡಿನ ಸಾಲುಗಳನ್ನು ಉಲ್ಲೇಖಿಸಿ ತಮ್ಮ ಅಭಿಪ್ರಾಯವನ್ನು ಈ ರೀತಿ ವ್ಯಕ್ತಪಡಿಸಿದ್ದಾರೆ. "ಆನೆಯ ರೋಗವನ್ನು ಬೈನೆ ಮರದ ಗರಿಯಲ್ಲಿ ಪರಿಹರಿಸು, ಎಮ್ಮೆಯ ರೋಗವನ್ನು ಹಳ್ಳದಲ್ಲಿ ಪರಿಹರಿಸು, ಗೋವಿನ ರೋಗವನ್ನು ಹುಲ್ಲಿನಲ್ಲಿ ಪರಿಹರಿಸು, ನಾಯಿಯ ರೋಗವನ್ನು ಬೂದಿಯಲ್ಲಿ ಪರಿಹರಿಸು, ಬೆಕ್ಕಿನ ರೋಗವನ್ನು ಹಾಲಿನಲ್ಲಿ ಪರಿಹರಿಸು, ಕೋಳಿಯ ರೋಗವನ್ನು ಗೂಟದಲ್ಲಿ ಪರಿಹರಿಸು, ಹಂದಿಯ ರೋಗವನ್ನು ತೌಡಿನಲ್ಲಿ ಪರಿಹರಿಸು, ಮನುಷ್ಯ ರೋಗವಾದರೆ ಅನ್ನದಲ್ಲಿ ಪರಿಹರಿಸು, ಕುಂಟೆ ರೋಗವಾದರೆ ಪಡುವಣದಲ್ಲಿ ಪರಿಹರಿಸು ಎಂಬ ಹಾಡಿನ ಸಾಲುಗಳನ್ನು ಗಮನಿಸಿದಾಗ ಇಲ್ಲಿ ವಿವಿಧ ಪ್ರಾಣಿ ಪಕ್ಷಿಗಳಿಗೆ ಇಷ್ಟವಾದ ಆಹಾರದ ಮೂಲಕ ಅವುಗಳ ರೋಗವನ್ನು ಗುಣಪಡಿಸುವ ವಿಚಾರ ಬರುತ್ತದೆ. ಆಯಾ ಪ್ರಾಣಿಗಳಿಗೆ ಇಷ್ಟವಾದ ಅಹಾರ ವಸ್ತುಗಳ ಪೂರೈಕೆಯಿಂದ ಅವುಗಳ ರೋಗ ಪರಿಹಾರ ಸಾಧ್ಯ ಎಂಬ ಆಶಯ ವ್ಯಕ್ತವಾಗಿದೆ" ಎಂದು ಹೇಳುತ್ತಾರೆ.

**೩. <u>ಆಟಿ ತಿಂಗಳ ವಿಶೇಷ ಖಾದ್ಯಗಳು :-</u>**

"ಆಟಿ ತಿಂಗೊಳ್ ಅರಂಟ್ ತಿನ್ಪಿ ಕಾಲ" (ಆಟಿ ಕಾಲ ಸಿಕ್ಕಿದ್ದು ತಿನ್ನುವ ಕಾಲ) ಆಟಿ ತಿಂಗಳಲ್ಲಿ ಆಹಾರದ ಕೊರತೆಯುಂಟಾಗುತ್ತಿತ್ತು ಎಂಬುದನ್ನು ಈ ಗಾದೆಮಾತಿನಿಂದ ತಿಳಿದುಕೊಳ್ಳಬಹುದಾಗಿದೆ. ೬೦-೮೦ ಜನ ವಾಸಿಸುತ್ತಿದ್ದ ಕೂಡು ಕುಟುಂಬದ ವ್ಯವಸ್ಥೆಯಲ್ಲಿ ಕೃಷಿಯೇ ಅಹಾರ ಹಾಗೂ ಆರ್ಥಿಕತೆಯ ಮೂಲವಾಗಿತ್ತು. ಆಟಿ ತಿಂಗಳಲ್ಲಿ ಕೃಷಿಗೂ ಸೂಕ್ತವಾದ ವಾತಾವರಣವಿಲ್ಲದೆ ಹೋದಾಗ 'ಆಟಿ' ಆಹಾರದ ಕೊರತೆಯನ್ನುಂಟು ಮಾಡಿ ಮನೆ ಮಂದಿಗೆಲ್ಲ 'ಹಸಿವು' ಎಂದರೆ ಏನೆಂಬುದನ್ನು ಆಟಿ ತಿಳಿಸುತ್ತಿತ್ತು.

"ಗಂಜಿಗೆ ಅಕ್ಕಿ ಇಲ್ಲ, ಆದರೂ ಹೊಟ್ಟೆ ತುಂಬಿಸಿಕೊಳ್ಳಲು ಕಾಡಿನಲ್ಲಿ ಆಹಾರ ಸಂಪತ್ತು ಧಾರಳವಾಗಿ ಸಿಗುತ್ತದೆ. ಗುಡ್ಡೆಗೆ ಹೋಗಿ ನರೆ, ಈಯರ್ ಗಡ್ಡೆಗಳನ್ನು ತೆಗೆದು ತಂದು ಬೇಯಿಸಿ ತಿನ್ನುತ್ತಿದ್ದರು. ಕಾಡಿಗೆ ಹೋಗಿ ಕಣಿಲೆ ತಂದು ಪದಾರ್ಥ ಮಾಡುತ್ತಿದ್ದರು. ಅಡ್ಡಬಾರೆ, ಎದ್ರೋಳಿ ಕಾಯಿ ಧಾರಳವಾಗಿ ಸಿಗುತ್ತಿತ್ತು. ಅಡ್ಕಬಾರೆ, ಅವುಗಳನ್ನು ಬೇಯಿಸಿ ಪಲ್ಯ ಮಾಡುತ್ತಿದ್ದರು ಕೆಸುವಿನ ಎಲೆಯ ಪತ್ರೊಡೆ ಮಾಡುತ್ತಿದ್ದರು. ಈ ಹೊತ್ತಿನಲ್ಲಿ ಅಲ್ಲಲ್ಲಿ ಅಣಬೆಗಳು ಏಳುತ್ತಿದ್ದವು. ಅಣಬೆಯ ಪದಾರ್ಥ ಬಹಳ ರುಚಿಯಾಗಿರುತ್ತಿತ್ತು. ಕಾಡಿನಲ್ಲಿ ಆಟಿ ಸೊಪ್ಪು ಸಿಗುತ್ತಿತ್ತು. ಅಕ್ಕಿಯ ಪಾಯಸಕ್ಕೆ ಆಟಿ ಸೊಪ್ಪು ಹಾಕಿದರ ಬಹಳ ರುಚಿ ಏನೂ ಸಿಗದಿದ್ದರೆ ಮನವಿಯಲ್ಲಿ ಹಲಸಿನ ಬೀಜ ಇರುತ್ತದೆ. ಬೇಸಿಗೆಯಲ್ಲಿ ತೆಗೆದಿಟ್ಟ ಗೇರು ಬೀಜ ಇರುತ್ತದೆ. ಅದನ್ನು ಬೆಂಕಿಯಲ್ಲಿ ಸುಟ್ಟು ತಿನ್ನುತ್ತಿದ್ದರು. ಹೀಗೆ ಹೊಟ್ಟೆ ತುಂಬಿಕೊಳ್ಳುತ್ತಿದ್ದರು, ಹೀಗೆ ಹೊಟ್ಟೆಗೂ ಹಸಿವಿಗೂ ಆಗುತ್ತದೆ ಮದ್ದಿಗೂ ಆಗುತ್ತದೆ ಎನ್ನುವ ಹಿನ್ನೆಲೆಯಲ್ಲಿ ಕಾಡು

ಸಂಪತ್ತಿನ ಬಳಕೆ ಆಗುತ್ತಿತ್ತು.(ತುಳು ಸಂಸ್ಕೃತಿದ ಪೊಲಬು) – ಪಾ.ರಾಮಕೃಷ್ಣಚಾರ್ (44) ಎಂಬಂತೆ ತುಳು ಪದದ ಕುರಿತಾಗಿ ವಿದ್ವಾಂಸರು ವಿವರಣೆ ನೀಡಿದ್ದಾರೆ.

ತುಳುನಾಡಿನಲ್ಲಿ 'ಆಟಿ' ತಿಂಗಳಲ್ಲಿ ಸಿಗುವ ತಿಂಡಿ ತಿನಿಸುಗಳು, ವಿಶಿಷ್ಟವೂ ರುಚಿಕರವೂ ಆರೋಗ್ಯವರ್ಧಕವೂ ಹೌದು. ಈ ತಿಂಗಳ ಬಗೆ ಬಗೆಯ ಖಾದ್ಯಗಳನ್ನು ವಿವರಿಸುವುದಾದರೆ

೧. **ಕೇನೆಪುಂಡಿ** :- 'ಕೇನೆ' ಎನ್ನುವುದು ತುಳುನಾಡಿನ ಪೂರ್ವ ವಲಯದ ಹಾಡಿಗುಡ್ಡೆಗಳಲ್ಲಿ ನೆಲದಡಿಯಲ್ಲಿ ಬೆಳೆಯುವ ಒಂದು ತೆರೆನ ಗಡ್ಡೆ 'ಆಟಿ' ತಿಂಗಳಲ್ಲಿ ಈ ಗೆಡ್ಡೆಯು ಸರಿಯಾಗಿ ಬಲಿತಿರುವುದು ಈ ಗಡ್ಡೆಗಳನ್ನು ಅಗೆದು ತಂದು ಶುದ್ಧಗೊಳಿಸಿ ಅಮಟೆ ಸೊಪ್ಪಿನೊಂದಿಗೆ ನೀರಿನಲ್ಲಿ ಬೇಯಿಸಿ ಕೇನೆಗುಡ್ಡೆಯ ತುರಿಸುವಿಕೆಯ ಗುಣವನ್ನು ದೂರಮಾಡುವುದು. ಬಳಕ ಅದರ ಸಿಪ್ಪೆ ತೆಗೆದು ಹೋಳುಗಳಾಗಿ ಕತ್ತರಿಸುವರು. ಕುಚಲಕ್ಕಿಯನ್ನು ನೀರಿನಲ್ಲಿ ನೆನೆಹಾಕಿ ಕೇನೆಗಡ್ಡೆಯ ಹೋಳು ತಿರಿಸಿ ಅರೆಯುವರು. ಈ ರೀತಿ ರುಬ್ಬಿದ ತೆಂಗಿನ ಕಾಯಿ ತುರಿಯನ್ನು ಹಾಕಿ ಬಳಕ ಅದನ್ನು ಉಂಡೆ (ಮುಷ್ಟಿ ಗಾತ್ರದಷ್ಟು) ಮಾಡಿ ಬೇಯಿಸಿ ಬೆಂದ ಬಳಕ ಅದನ್ನು ಚಿಕ್ಕ ಬುಟ್ಟಿಯಲ್ಲಿಟ್ಟು ಮನೆಯ 'ಕುತ್ಯಟ್ಟ' (ಮುಂಡು ಮಾಳಿಗೆ)ದಲ್ಲಿ ಅಕ್ಕಿಮುಡಿಗಳ ರಾಶಿಯ ಮೇಲೆ ಪ್ರೇತಗಳ ಇದು ಸ್ವೀಕೃತಿಯಾಗುವುದೆಂಬ ನಂಬಿಕೆಯೊಂದಿಗೆ ಇಡುವರು. ಈ ರೀತಿ ಮಾಡುವುದರಿಂದ ಭತ್ತದ ಬೆಳೆಯಲ್ಲಿ ಸಮೃದ್ಧಿಯಾಗುವುದು ಎಂಬ ನಂಬಿಕೆಯೂ ಇದೆ.

೨. **ಕಿರ್ಂಬೆಲ್ ಕಂಡೆ (ತುರಿಸುವ ಗಡ್ಡೆ) :-** ಈ ಗಡ್ಡೆಯನ್ನು ಅಗೆದು ತಂದು ನಿರ್ಮಲಗೊಳಸಿ ಕತ್ತರಿಸಿ ಕುಚಲಕ್ಕಿಯ ಜೊತೆ ಸೇರಿಸಿ ಗಂಜಿ ತಯಾರಿಸುವರು. ಈ ಖಾದ್ಯವನ್ನು ಆಟಿ ತಿಂಗಳಲ್ಲಿ ಕನಿಷ್ಠ ಮೂರು ದಿನ ಉಣ್ಣುವ ಸಂಪ್ರದಾಯವಿದೆ. ಇದನ್ನು ಸೇವಿಸುವುದರಿಂದ ದೇಹಕ್ಕೆ ರೋಗನಿರೋಧಕ ಶಕ್ತಿ ಸಿಗುವುದು ಎಂಬ ಹೇಳಿಕೆ ಇದೆ.

೩. **ಉದುರು ಬೂರು** :- ಈ ಬೀಳಲು ಕೂಡಾ ತುಳುನಾಡಿನ ಮೂಡಣ ಕಾಡುಹಾಡಿನಲ್ಲಿ ದೊರಕುವುದು. ಮಹಿಳೆಯರು ಕೂದಲಿನ ಜೊತೆ ಉಪಯೋಗಿಸುವ 'ಚೌರಿ' ತೆರೆನ ಈ ಬೀಳಲು ಸಪೂರ ಎಲೆಗಳನ್ನು ಹೊಂದಿರುತ್ತದೆ. ಈ ಬೀಳಲಿನ ಎಲೆಗಳನ್ನು ಬೇರ್ಪಡಿಸಿ ಕುಚ್ಚಲಕ್ಕಿಯ ಒಟ್ಟಿಗೆ ಬೇಯಿಸಿ ಉಣ್ಣುವುದೂ ಕೂಡಾ ಆರೋಗ್ಯಕರ ಎನ್ನುವರು.

೪. **ಮೆತ್ತೆದ ಗಂಜಿ**

ತುಳುನಾಡಿನ ಹಿರಿಯರ ಅನುಭವದ ಮಾತಿನಂತೆ ಮೆಂತೆಯನ್ನು ಮೊದಲದಿನ ನೀರಿನಲ್ಲಿ ನೆನೆಸಿಟ್ಟು ತೆಂಗಿನಕಾಯಿ, ಬೆಲ್ಲ ಸೇರಿಸಿ ಸರಿಯಾಗಿ ಅಕ್ಕಿಯ ಜೊತೆ ತಯಾರಿಸುವ ಗಂಜಿಯನ್ನು ಆಟಿ ತಿಂಗಳಲ್ಲಿ ಕನಿಷ್ಠ ಮೂರು ದಿನ ಉಣ್ಣಬೇಕು. ಆಟಿ ಅಮಾವಸ್ಯೆಯ ಹಾಲೆ ರಸ ಕುಡಿದ ಬಳಕ ದೇಹಕ್ಕೆ ತಂಪು ನೀಡಿ ಸಮತೋಲನ ಕಾಪಾಡಿಕೊಳ್ಳಲಿಕ್ಕಾಗಿಯೂ ಮದ್ದು ಕುಡಿದ ಬಳಕದಲ್ಲಿ ಮೆಂತೆ ಗಂಜಿ ಉಣ್ಣುವುದು ರೂಢಿಯಾಗಿ ಬಂದಿದೆ. ಇನ್ನೂ ಹಲವೆಡೆ ಹಾಲೆರಸದ ಮದ್ದು ಕುಡಿದ ಬಳಕದಲ್ಲಿ ಪತ್ರೊಡೆಯನ್ನು ಸೇವಿಸುವ ರೂಢಿಯೂ ಇದೆ. ಈ ಎಲ್ಲಾ ಖಾದ್ಯಗಳು ಶಕ್ತಿವರ್ಧಕವೂ ಹೌದು.

"ತುಳುನಾಡಿನ ಹಿಂದಿನ ಕಾಲದ ಜನರು ಆಹಾರದಲ್ಲೇ ಔಷಧಿಯನ್ನು ಪಡೆಯುತ್ತಿದ್ದರು. ಅವರು ಸಂಸ್ಕೃತಿ ಆರಾಧಕರು ಯಾವ ವಸ್ತುಗಳಲ್ಲಿ ಯಾವ ಗುಣಗಳಿವೆ ಎಂಬ ವಿಚಾರವು ಅವರಿಗೆ ಗೊತ್ತಿತ್ತು. ಹುಲ್ಲುಮದ್ದಿನಲ್ಲಿ, ಪಥ್ಯದಲ್ಲಿ ಆಹಾರದಲ್ಲಿ ಅವರು ರೋಗಗಳನ್ನು ಗುಣಪಡಿಸುತ್ತಿದ್ದರು. ಅವರಿಗೆ ಮದ್ದು ಮಾಡುವ ವಿಧಾನ ಕೂಡಾ ಒಂದು ಸಂಸ್ಕೃತಿ. ಆಹಾರ ಪದ್ಧತಿ ಕೂಡಾ ಒಂದು ಸಂಸ್ಕೃತಿ. ಒಂದೆಲಗ, ಬಾಳೆದಂಡು, ನುಗ್ಗೆ, ಹೊಂಬಾಳೆ, ಕೆಸು, ತೊಂಜಂಕ್ ಇವೆಲ್ಲ ಅವರಿಗೆ ಆಹಾರವೂ ಹೌದು, ಔಷಧಿಯೂ ಹೌದು. ಪದಾರ್ಥಕ್ಕೆ ಏನೂ ಇಲ್ಲದ ಹೊತ್ತಿನಲ್ಲಿ ಕಾಡಿನಲ್ಲಿದ್ದ ಕೇಪುಳ, ನೆಕ್ಕರೆ, ಚೀಮುಳ್ಳು, ಪೇರೆ, ಪೇರಳೆ ಮಾದೇರಿ ಹೀಗೆ ಕೆಲವು ಜಾತಿಯ ಗಿಡಗಳ ಚಿಗುರು ಕೊಯ್ದು ತಂದು ಪಲ್ಯ ಮಾಡುತ್ತಿದ್ದರು. ಇದರಲ್ಲಿ ಊಟ ಮಾಡಿದರೆ ಹೊಟ್ಟೆ ಶುದ್ಧ ಆಗುತ್ತಿತ್ತು. ಮಕ್ಕಳಿಗೆ ಚಿಗುರು ಮದ್ದು (ಕೊಡಿಮರ್ದ್) ರಸ ತೆಗೆದುಕೊಡುತ್ತಿದ್ದರು. ದೊಡ್ಡದಾದ ಮೇಲೂ ಮಗುವಿಗೆ ಕಫ ಅಸ್ತಮದ ಬಾಧೆ ಬರುತ್ತಿರಲಿಲ್ಲ. ಬಾಣಂತಿಗೆ ಬೇರೆ ಬೇರೆ ರೀತಿಯ ಮದ್ದಿನ ಗಂಜಿ, ಲೇಹ ಮಾಡಿಕೊಡುವ ಕ್ರಮ ಇತ್ತು. ಮದ್ದು ಅರೆಯುವುದು ಅದನ್ನು ಶುದ್ಧ ಮಾಡುವುದು, ಮದ್ದು ಕುಡಿಯುವುದು ಇವೆಲ್ಲ ಒಂದು ರೀತಿಯ ಆಚರಣೆಗಳಾಗಿದ್ದವು. ಹೀಗೆ ತುಳುವರಿಗೆ ಮದ್ದು ಮಾಡುವುದು ಕೂಡಾ ಒಂದು ಸಂಸ್ಕೃತಿಯಾಗಿತ್ತು" (ತುಳು ಸಂಸ್ಕೃತಿದ ಪೊಲಬು – ಡಾ। ಪಾಲ್ತಾಡಿ ರಾಮಕೃಷ್ಣಾಚಾರ್) ಎಂದು ಹಿರಿಯ ವಿದ್ವಾಂಸರು ಹೇಳಿದ್ದಾರೆ.

ಡಾ। ಪಾಲ್ತಾಡಿ ರಾಮಕೃಷ್ಣಾಚಾರ್‌ರವರ ತುಳು ಸಂಸ್ಕೃತಿದ ಪೊಲಬು ಪುಸ್ತಕದಲ್ಲಿ "ಆಟಿಯಲ್ಲಿ ಒಂದೆಲಗ (ತಿಮರೆ) ತಿನ್ನುವ ಕ್ರಮವಿಲ್ಲ. ಆಗ ಇದು ಕಹಿಯಾಗಿರುತ್ತದೆ ಎಂದು ಜನರ ನಂಬಿಕೆ" ಎಂದು ಬರೆದಿದ್ದಾರೆ. ಆದರೆ ಬನ್ನಂಜೆ ಬಾಬು ಅಮೀನ್‌ರವರು ತಿಮರೆ ಚಟ್ನಿಯನ್ನು ಆಟಿಯಲ್ಲಿ ತಿನ್ನಬಹುದು ಎಂಬುದನ್ನು ಆಟಿ ಸೋಣ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಪ್ರತಿಯೋರ್ವನ ನಂಬಿಕೆ ಅನುಸರಿಕೆಗೆ ಅನುಸಾರವಾಗಿ ರೂಢಿಯೆಂಬುದು ಪೀಳಿಗೆಯಿಂದ ಪೀಳಿಗೆಗೆ ವರ್ಗಾವಣೆಯಾಗುತ್ತಾ ಬಂದಿದೆ ಎನ್ನಬಹುದು.

# ಅಧ್ಯಾಯ 7

## ಸ್ಥಿತ್ಯಂತರಗೊಳ್ಳುತ್ತಿರುವ ಮಂಗಳೂರಿನ ಆಟಿ ಆಚರಣೆಯ ಸ್ವರೂಪ

### ಅ. ಆಟಿ ಆಚರಣೆ ಮತ್ತು ಭೌಗೋಳಿಕ ಪ್ರಾಕೃತಿಕ ಪರಿಸರದ ವಿಶ್ಲೇಷಣೆ

ಆಟಿ ಎಂದರೆ ಕರಿ ತಿಂಗಳು. ಶುಭಕಾಯಕಗಳಿಗೆ ನಿಶಿದ್ಧ. ಭೂಮಿಯನ್ನು ಒಂದೇ ಸವನೆ ಸುಡುವ ಸೂರ್ಯ ಮೋಡಗಳಿಂದಾಗಿ ತನ್ನ ಪ್ರತಾಪವನ್ನು ತೋರಿಸಲಾಗದೇ ನಿಧಾನವಾಗಿ ದಕ್ಷಿಣದತ್ತ ವಾಲಲು ತೊಡಗುತ್ತಾನೆ. ಆಗ ಮೋಡಗಳು ಸಂಚಯಗೊಂಡು ಹನಿಗಳಾಗಿ ನೀರಧಾರೆ ಸುರಿಸಲು ತೊಡಗುತ್ತದೆ. ಮಳೆಯ ಭೋರ್ಗರೆತ ಇಡೀ ಭೂಮಿಯನ್ನು ಆವರಿಸಿತೆಂದರೆ ಸೂರ್ಯ ಸಮಭಾಜಕ ವೃತ್ತವನ್ನು ದಾಟಿ ದಕ್ಷಿಣಕ್ಕೆ ಪ್ರಯಾಣ ಬೆಳೆಸಿದ್ದಾನೆ ಎಂದರೆ ದಕ್ಷಿಣಾಯದ ಪ್ರಾರಂಭ. ದಕ್ಷಿಣಾಯನ ಆರಂಭದ ತಿಂಗಳು ಆಟಿ.

ಆಟಿ ತಿಂಗಳಿಗೆ ಮೊದಲು ಬರುವ ತಿಂಗಳು 'ಕಾರ್ತೆಲ್' ಈ ತಿಂಗಳಲ್ಲಿ ಮಳೆಯ ಅಬ್ಬರ ಸಾಕಷ್ಟಿರುವುದು ತುಳುನಾಡಿನ ಮಣ್ಣಿನ ಮಕ್ಕಳಿಗೆ ದಿನವಿಡೀ ಕಾರ್ತೆಲ್ ತಿಂಗಳಲ್ಲಿ ಭತ್ತದ ಗದ್ದೆಗಳಲ್ಲಿ ನಾಟಿ ಮಾಡುವ ಕೆಲಸ ಕಾರ್ಯಗಳಿಂದಾಗಿ ಬಿಡುವಿಲ್ಲದ ದುಡಿಮೆ. ಹಾಗಾಗಿ ಮಳೆ, ಚಳಿ, ಗಾಳಿ, ಗಣನೆ ಬರಲಾರದು. ಅಂದಿನ ಮಳೆಯ ಭೀಕರತೆ ಇಂದಿನಂತಲ್ಲ. ಒನಕೆಯಂತೆ ತೋರದ ಮಳೆಹನಿ, ಸೂರ್ಯನ ದರ್ಶನ ಸಾಧ್ಯವೇ ಇರಲಿಲ್ಲ. ಮಣ್ಣು ಸಡಿಲಗೊಂಡು ಕಾರಂಜಿಯಂತೆ ನೀರು ಪುಟಿಯುತ್ತಿರುವುದು. 'ಪುರ್ಸೆ ಬರ್ಸ' ಪುಣ ಪಿದಯಿ ದಿವೇರೆಗ್ ಬುಡಂದ್ (ಪುನರ್ವಸ) ಪುಷ್ಯ ನಕ್ಷತ್ರದ ಮಳೆಯ ಬಿರುಸಿಗೆ ಸಾವು ಸಂಭವಿಸಿದರೆ ಹೆಣವನ್ನು ಸಂಸ್ಕಾರ ಮಾಡುವುದಕ್ಕೂ ತೊಂದರೆಯಾಗುವುದು ಎಂಬ ತುಳುವರ ಮಾತಿನಿಂದ ಅಂದಿನ ಮಳೆಯ ಭೀಕರತೆಯನ್ನು ಅರ್ಥಮಾಡಿಕೊಳ್ಳಬಹುದು. ಈ ರೀತಿಯಾಗಿ ಆಟಿ ತಿಂಗಳಲ್ಲಿ ಪ್ರಕೃತಿಯಲ್ಲಿ ಬದಲಾವಣೆಯಾಗುವುದು ಗೋಚರಿಸುತ್ತದೆ

ಆಟಿ ತಿಂಗಳು ಮಳೆಗಾಲ ಹಾಗೂ ಬೇಸಿಗೆಕಾಲದ ನಡುವೆ ಬರುತ್ತದೆ. ಮಳೆ ಮತ್ತು ಬಿಸಿಲುಗಳಿಂದಾಗಿ ಹವಾಮಾನದಲ್ಲಿ ಸ್ಥಿತ್ಯಂತರ ಉಂಟಾಗುತ್ತದೆ. ಒಂದರ್ಥದಲ್ಲಿ ಈ ಆಟಿ ತಿಂಗಳು ಮಳೆ, ಬಿಸಿಲುಗಳ ಸಂಕ್ರಮಣ ಕಾಲಘಟ್ಟ. "ಎರಡು ವಿರುದ್ಧ ಪ್ರಕಾರ/ವರ್ಗಗಳ ನಡುವಿನ 'ಸಂಕ್ರಮಣ' ಅಥವಾ 'ಸ್ಥಿತ್ಯಂತರದ ಸ್ಥಿತಿಯು (Transition between Oposed Categories) ಜನರಲ್ಲಿ ಆತಂಕ, ಭಯ ಅಥವಾ ಸಂತೋಷದ ಭಾವನೆಗಳನ್ನು ಉಂಟುಮಾಡುತ್ತದೆ. ಈ ದೃಷ್ಟಿಯಿಂದ ಗಮನಿಸಿದಾಗ ಸೌರಮಾನ ಪದ್ಧತಿಯಂತೆ ಕಾಲಮಾಪನ ಮಾಡುವ ತುಳುವ ಸಂಸ್ಕೃತಿಯಲ್ಲಿ ಸಂಕ್ರಮಣ (ಸ್ಥಿತ್ಯಂತರ) ವು ವಿಶೇಷ ಮಹತ್ವವನ್ನು ಪಡೆದಿರುವುದು, ಆಚರಣೆ ಹಬ್ಬಗಳನ್ನು ಹೊಂದಿರುವುದು ಮುಖ್ಯವೆನಿಸುತ್ತದೆ. ಅದರಲ್ಲಿಯ ಮಳೆಗಾಲದ ಆರಂಭವಾದ ಬಳಿಕದ ಸಂಕ್ರಮಣ ಹಾಗೂ ಆನಂತರದ ತಿಂಗಳು 'ಆಟಿ' ಯು ಹವಮಾನದ ಸ್ಥಿತ್ಯಂತರದ ದೃಷ್ಟಿಯಿಂದಲೂ ಅಧ್ಯಯನ ಯೋಗ್ಯವಾದುದು ಬೇಸಗೆ ಮತ್ತು ಮಳೆಯಂತಹ ಎರಡು ವಿರುದ್ಧ ಋತುಗಳು ಒಂದರ ಬಳಿಕ ಇನ್ನೊಂದು ಬಂದಾಗ ಹವಮಾನದ

ವ್ಯತ್ಯಾಸವು ಮನುಷ್ಯನ ಬದುಕಿನ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ. ಅವುಗಳಲ್ಲಿ ಬಹುಮುಖ್ಯವಾದುದು ರೋಗಗಳು. ಸೂರ್ಯನ ಬಿಸಿಲಿನಲ್ಲಿ ಇರಲು ಅಸಾಧ್ಯವಾದ ಬ್ಯಾಕ್ಟೀರಿಯಾ ಕ್ರಿಮಿಗಳು ಮಳೆಗಾಲದಲ್ಲಿ ನೀರಿನ ತೇವದಲ್ಲಿ ಆಶ್ರಯ ಅಭಿವೃದ್ಧಿ ಹೊಂದದ ಕಾಲವದು. ವೈದ್ಯರ ಚಿಕಿತ್ಸೆಗೆ ರೋಗ ಗುಣಮುಖವಾಗದೆ ಮತ್ತಷ್ಟು ಉಲ್ಬಣಗೊಳ್ಳುತ್ತಿತ್ತು. ಆಗ ಜನ ಹೆದರಿ ಕಂಗಾಲಾಗುತ್ತಿದ್ದುದೂ ಸಹಜ.

"ಸಾಮಾನ್ಯವಾಗಿ ಹಾಸಿಗೆ ಹಿಡಿದ ವೃದ್ಧರು ಆಗಿನ ಕಾಲದಲ್ಲಿ ಆಟಿ ತಿಂಗಳಲ್ಲಿ ಮರಣ ಹೊಂದುತ್ತಿದ್ದರು. ಕಾರಣ ಆ ತಿಂಗಳಿನ ಅನಾರೋಗ್ಯಕರ ವಾತಾವರಣ ಹಾಗಾಗಿ ಹಾಸಿಗೆ ಹಿಡಿದ ವೃದ್ಧರಿಗೆ ಸೋಂಕು ತಗುಲಿ ಅವರು ಮರಣ ಹೊಂದುತ್ತಿದ್ದರು ಎಂದು ಹಿರಿಯ ಸಾಹಿತಿ ವಾಮನ ನಂದಾವರರು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಹೇಳಿದ್ದಾರೆ.

'ಆಟಿಡ್ ತೆಡಿಲ್ ಬತ್ತ್‌ಂಡ ಅಟ್ಟ ಪೊಲಿಯು, ಸೋಣಡ್ ತೆಡಿಲ್ ಬತ್ತ್‌ಂಡ ಸೊಂಟ ಪೊಲಿಯು' (ಆಟಿಯಲ್ಲಿ ಸಿಡಿಲು ಬಂದರೆ ಅಟ್ಟ ಮುರಿದು ಬೀಳುವುದು, ಸೋಣದಲ್ಲಿ ಸಿಡಿಲು ಬಂದರೆ ಸೊಂಟ ಮುರಿಯುವುದು) ಎಂಬ ಗಾದೆಯು ಆಟಿ ತಿಂಗಳಿನಲ್ಲಿ ಭೌಗೋಳಿಕ ಹಾಗೂ ಪ್ರಾಕೃತಿಕ ವಾತಾವರಣ ಹೇಗಿರುತ್ತದೆ ಹಾಗೂ ಅದರ ಪರಿಣಾಮ ಹೇಗಿರುತ್ತದೆ ಎಂಬುದನ್ನು ಹೇಳುತ್ತದೆ. ಆಟಿಯಲ್ಲಿ ಬರುವ ಮಳೆಯಿಂದ ಅಥವಾ ತಡೆಯಲಾಗದ ಬಿಸಿಲಿನಿಂದ ಜನರು ಮನೆಬಿಟ್ಟು ಹೊರಹೋಗಲು ಅಸಾಧ್ಯವಾಗಿ ಎಲ್ಲಾ ಕೆಲಸಗಳು ಅರ್ಧದಲ್ಲೆ ನಿಂತು ಹೋಗುತ್ತದೆ. ಕೆಲಸ ಮಾಡಲು ಅಸಾಧ್ಯವಾಗಿ ಹೊಟ್ಟೆಗೂ ಏನೂ ಸಿಗದಂತಾಗುತ್ತದೆ. ಮನೆಯ ಆರ್ಥಿಕ ವ್ಯವಸ್ಥೆಯಲ್ಲಿ ಏರುಪೇರು ಉಂಟಾಗುತ್ತದೆ. ಇಷ್ಟು ಸಾಲದಲ್ಲ ಎನ್ನುವುದಕ್ಕೆ ಹವಾಮಾನದ ಕೆಟ್ಟ ಪರಿಣಾಮದಿಂದಾಗಿ ರೋಗಗಳು ತಲೆದೋರುತ್ತದೆ, ಪಡೆದು ಕ್ರಿಯಾಶೀಲವಾಗುತ್ತದೆ. ಬಹಳ ಬೇಗನೇ ತಮ್ಮ ಚಟುವಟಿಕೆಗಳಿಂದ ರೋಗಗಳನ್ನುಂಟು ಮಾಡಿ ಅವು ರೋಗ ಹರಡುವಂತೆ ಮಾಡುತ್ತವೆ." (ಅನ್ವಯಿಕ ಜಾನಪದ ಬಿ.ಎ. ವಿವೇಕ್ ರೈ ೪೫-೪೭)

ಮಳೆ ಬಿಸಿಲಿನ ಏರುಪೇರಿನಿಂದಾಗಿ ಹವಾಮಾನದ ಸ್ಥಿತ್ಯಂತರ ಉಂಟಾಗಿ ಭೂಮಿಯ ಮೇಲಿನ ಮನುಷ್ಯ ಜೀವಿಗಳಿಗೆ ರೋಗ ರುಜಿನಗಳು ಉಲ್ಬಣಿಸುತ್ತದೆ. ಆದರೆ ಇಂತಹ ರೊಗರುಜಿನಗಳಿಗೆ ಆಗ ತುಳುವರು ಪ್ರಾಕೃತಿಕವಾಗಿ ಔಷಧಿ ತಯಾರಿಸುತ್ತಿದ್ದರು. ಎಲ್ಲಾ ರೀತಿಯ ರೋಗ ನಿರೋಧಕತೆಯನ್ನು ಹೊಂದಿರುವ ಹಾಲೆರಸವನ್ನು ಆಟಿ ಅಮವಾಸ್ಯೆಯಂದು ಸೇವಿಸುವುದನ್ನು ಆಚರಣೆಯನ್ನಾಗಿ ತುಳುವರು ಮಾಡಿಕೊಂಡು ಬಂದರು.

ಮಳೆ ವಿಪರೀತ ಸುರಿದಾಗ ನೆಲ ಅತಿಯಾಗಿ ತೇವಗೊಂಡು ಪರಿಸರ ಶೀತಲವಾಗಿರುವುದು. ಕೆಲವು ತಗ್ಗುಪ್ರದೇಶಗಳಲ್ಲಿ ಸೆಗಣಿ ಸಾರಿಸಿರುವ ಮನೆಯ ನೆಲದ ಮೇಲೆ ಒಣಗಿದ ಸೋಗೆ, ಬೈಹುಲ್ಲು ಹರಡಿ ಅದರ ಮೇಲೆ ಚಾಪೆ ವಾಸಿಸುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಖಾಯಿಲೆಯಿಂದ ಬಳಲುತ್ತಿದ್ದವರು, ಹಸಿಬಾಣಂತಿಯರು ಹಸುಗೂಸುಗಳು ಬಹಳ ತೊಂದರೆಯನ್ನು ಅನುಭವಿಸಬೇಕಿತ್ತು. ಇಂತಹ ವಿಷಮ ಶೀತ ಪರಿಸ್ಥಿತಿಯಲ್ಲೇ ವಿಷಯ ಶೀತ ಜ್ವರ ಮೊದಲಾದ ಸಾಂಕ್ರಾಮಿಕ ರೋಗಗಳು ಹಳ್ಳಿಗಳಲ್ಲಿ ಹುಟ್ಟಿ ಹರಡುತ್ತಿದ್ದವು. ಆ ಮೂಲಕ ಜನ ಜೀವನವನ್ನು

ಪ್ರಾಕೃತಿಕ ಪರಿಸರವನ್ನು ಅಸ್ತವ್ಯಸ್ತಗೊಳಸುತ್ತಿದ್ದವು. ವೈದ್ಯಕೀಯ ಸೌಲಭ್ಯಗಳು ಅದನ್ನು ಗುಣಮುಖವಾಗಿರಲು ಅಂದಿನ ಕಾಲದ ಜನರು ಪರದಾಡುತ್ತಿದ್ದರು.

'ಆಟಿ ತಿಂಗಳು ದಕ್ಷಿಣಾಯನದಲ್ಲಿ ಆರಂಭವಾಗುವ ತಿಂಗಳು ಈ ತಿಂಗಳಲ್ಲಿ ಮರಗಳಲ್ಲಿ ಅದರಲ್ಲೂ ಹಾಲೆಮರದ ಬುಡಕ್ಕೆ ಅಂದರೆ ದಕ್ಷಿಣಕ್ಕೆ ಸೂರ್ಯನ ಬಿಸಿಲು ಸರಿಯಾಗಿ ಬೀಳುತ್ತದೆ. ಆದ್ದರಿಂದ ಹಾಲೆ ಮರದ ತೊಗಟೆಯನ್ನು ತೆಗೆಯುವ ಬುಡದಿಂದ ತೆಗೆದಲ್ಲಿ ಉತ್ತಮ ಎಂದು ವಿಶ್ವನಾಥ ಬದಿಜಾನ - ಪ್ರಾಧ್ಯಾಪಕರು ಸಂತ ಅಲೋಷಿಯಸ್ ಕಾಲೇಜ್‌ರವರು ರೇಡಿಯೋ ಸಾರಂಗ್‌ದ ತುಳುಚಾವಡಿಯ ಕಾರ್ಯಕ್ರಮದಲ್ಲಿ ಹೇಳದ್ದಾರೆ (೨೨.೦೭.೨೦೧೭)

ಹೀಗಾಗಿ ಪ್ರಾಕೃತಿಕವಾಗಿ ಹಾಗೂ ಭೌಗೋಳಕವಾಗಿ ಬಹುರೀತಿಯಲ್ಲಿ ಆಟಿ ಬಲು ಕೆಟ್ಟ ತಿಂಗಳು ಎಂಬುದನ್ನು ಅರ್ಥೈಸಿಕೊಳ್ಳುವುದು.

ಆ. ಆಟಿ ಆಚರಣೆಯ ಸ್ಥಿತ್ಯಂತರದ ಸಾಮಾಜಿಕ ಕಾರಣಗಳು

ಸಾಂಪ್ರಾದಾಯಿಕವಾಗಿ ತುಳುನಾಡಿನಲ್ಲಿ ಆಚರಿಸುತ್ತಾ ಬಂದ 'ಆಟಿ ಆಚರಣೆ' ಪ್ರಸ್ತುತ ಪಡೆದಿರುವ ಸ್ವರೂಪದ ಕುರಿತು ಅಧ್ಯಯನದ ನಡೆಯಲೇಬೇಕಿದೆ. ಹಿಂದಿನ ಕೂಡುಕುಟುಂಬದ ಬದುಕು ಕೃಷಿಯನ್ನೇ ಅವಲಂಭಿಸಿದೆ. ಅಂದಿನ ಬದುಕಿಗೂ ಇಂದಿನ ನಾಗಾಲೋಟದ ಅಭಿವೃದ್ಧಿಯೊಡನೆ ಕುಂತಲ್ಲಿ ನಿಂತಲ್ಲಿ ತಂತ್ರಜ್ಞಾನ ಎಂಬ ರೀತಿಯಲ್ಲಿ ಬದುಕುತ್ತಿರುವ ಜನರ ಬದುಕಿಗೂ ವ್ಯತ್ಯಾಸ ಕಾಣಲಾಗಿದೆ. ಅಂದಿನ ಕಾಲದಲ್ಲಿ ಸುತ್ತಲೂ ಹಚ್ಚ ಹಸುರು ಎಲ್ಲೆಡೆ ತುಂಬಿರುತ್ತಿತ್ತು. ಆದರೆ ಇಂದು ಎಲ್ಲೆಡೆ ಕಾಡು ಬೆಳೆಸಿ ನಾಡು ಉಳಸಿ ಘೋಷಣೆಯ ಉದ್ಧಾರಕಷ್ಟೇ ಸೀಮಿತವಾಗಿರುವಂತಹ ಪರಿಸ್ಥಿತಿ ಏರ್ಪಟ್ಟಿದೆ. ಕಾಡು ಅಳದು ಎಲ್ಲೆಡೆ ನಾಡೇ ಬೆಳೆದು ನಿಂತಿರುವ ಈ ಕಾಲದಲ್ಲಿ ಬದಲಾವಣೆಗಳೆಲ್ಲದರ ಪರಿಣಾಮವಾಗಿ ಎಲ್ಲ ರೀತಿಯ ಆಚರಣೆಗಳು ಸ್ಥಿತ್ಯಂತರವಾಗಿದೆ.

ಹಿಂದಿನ ಕಾಲದಲ್ಲಿ ಆಟಿ ತಿಂಗಳಲ್ಲಿ ವಿಪರೀತ ಮಳೆಯಿಂದಾಗಿ ಕೆಲಸ ಮಾಡಲು ಅಸಾಧ್ಯವಾಗುವಂತಹ ಕಾಲವಿತ್ತು. ಅಂದು ಕಾಣಸಿಗುತ್ತಿದ್ದ ಮಳೆಯ ಭೀಕರತೆ ಇಂದು ಗೋಚರಿಸುವುದಿಲ್ಲ. ಎಲ್ಲೆಡೆ ನೀರಿಗಾಗಿ ಅಹಾಕಾರವೇ ಜಾಸ್ತಿ. ಅಂದು ಕೃಷಿಯೇ ಜನರ ಮುಖ್ಯ ಜೀವನೋಪಾಯವಾಗಿತ್ತು. ಇಂದು ಕೃಷಿ ಭೂಮಿಯನ್ನು ಕಂಡೊಡನೆ ಅದನ್ನು ಸ್ವರ್ಗವನ್ನೇ ಕಂಡಂತೆ ಬೆಕ್ಕಸ ಬೆರಗಾಗುವವರು ಇದ್ದಾರೆ. ವಿಜ್ಞಾನ ತಂತ್ರಜ್ಞಾನದಲ್ಲಿ ಜಗತ್ತು ಮುಂದುವರಿದು ಅಭಿವೃದ್ಧಿಯಲ್ಲಿ ಸಾಗುತ್ತಿದೆ. ಕೂಡು ಕುಟುಂಬಗಳು ಎಲ್ಲೂ ಹೆಚ್ಚಾಗಿ ಇಂದು ಕಾಣಸಿಗುವುದಿಲ್ಲ. ಅವಿಭಾಜ್ಯ ಕುಟುಂಬಗಳೇ ಹೆಚ್ಚು. ಮನುಷ್ಯ ಮನುಷ್ಯರ ನಡುವಿನ ಮಾನವೀಯ ಸಂಬಂಧಗಳನ್ನು ಮರೆತಿದ್ದಾನೆ. ಇದನ್ನೇ ಮೈಗೂಡಿಸಿಕೊಂಡು ಪರಂಪರಾಗತ ಆಚರಣೆಗಳನ್ನು ಮರೆಯುತ್ತಿದ್ದಾನೆ. ಹಿಂದಿನ ಪೀಳಗೆಯವರ ಆಚರಣೆ ಸಂಪ್ರದಾಯ ನಂಬಿಕೆ ಕಟ್ಟು ಕಟ್ಟಳೆಗಳನ್ನು ಮುಂದುವರಿಸದೆ ಒಂದರ್ಥದಲ್ಲಿ ಮುಂದಿನ ಪೀಳಗೆಗೆ ಅದನ್ನು ವರ್ಗಾಯಿಸುವುದರಲ್ಲಿಯೂ ಆತ ಸೋಲುತ್ತಿದ್ದಾನೆ.

ಹಿಂದೆಲ್ಲ ಆಟಿ ತಿಂಗಳ ಹವಾಮಾನದ ಏರುಪೇರಿನಿಂದ ಜನರು ರೋಗರುಜಿನಗಳಿಂದ ಬಳಲುತ್ತಿದ್ದರಾದರೂ ಪ್ರಕೃತಿದತ್ತವಾದ ಚಿಕಿತ್ಸೆಯೊಂದಿಗೆ ಅದರ ಶುಶ್ರೂಷೆ ನಡೆಯುತ್ತಿತ್ತು. ಇಂದು ಕಾಲ ಬದಲಾಗಿದೆ. ಎಲ್ಲ ವಿಧದಲ್ಲೂ ಮಾನವ ಅಭಿವೃದ್ಧಿ ಹೊಂದಿದ್ದಾನೆ. ವೈದ್ಯಕೀಯ ಕ್ಷೇತ್ರದಲ್ಲಂತೂ ಬೇಕಾದಷ್ಟು ಅಭಿವೃದ್ಧಿ ಆಗಿರುವುದು ಅಪ್ಪಟ ಸತ್ಯ. ಆಟಿ ಬಡತನವನ್ನು ತಿಳಿಸುವ ಕಾಲ ಕೂಡು ಕುಟುಂಬದ ವ್ಯವಸ್ಥೆಯಲ್ಲಿ ಬದುಕಿದ ಜನರಿಗೆ ಈ ಆಟಿ ತಿಂಗಳ ಹಸಿವು ನೋವಿನ ಕುರಿತು ಗೊತ್ತಿಲ್ಲ. ಅದನ್ನು ಅರ್ಥ ಮಾಡಿಸುವಂತಹ ವಾತಾವರಣ ಬದಲಾಗಿರುವುದೇ ಈ ಸ್ಥಿತ್ಯಂತರಕ್ಕೆ ಮುಖ್ಯವಾದ ಕಾರಣ.

ಆಟಿಯಲ್ಲಿ ಅಟ್ಟ ಗುಡಿಸುವುದು ಮೊದಲಿನ ಒಂದು ಆಚರಣೆ. ಆದರೆ ಇಂದು ಈ ಆಚರಣೆ ಇಲ್ಲದಂತಾಗುತ್ತಿದೆ. ಕಾರಣ ಅಟ್ಟಗಳಿರುವ ಮನೆಯೇ ಇಲ್ಲ. ಇದ್ದರೂ ಆ ಮನೆಯವರಿಗೆ ಕೃಷಿ ಆರ್ಥಿಕ ಮೂಲವಾಗಿರುವುದಿಲ್ಲ. ಹಿಂದಿನ ಕಾಲದ ಜನರು ಸಂಗ್ರಹಣೆಯನ್ನು ಅಭ್ಯಾಸ ಮಾಡಿಕೊಂಡಿದ್ದರು. ಆಟಿ ತಿಂಗಳಲ್ಲಿ ಆಹಾರ ಸಂಗ್ರಹವಾದದ್ದೆಲ್ಲ ಮುಗಿದು ಹೋಗುವ ಸಂದರ್ಭ ಬಂದಾಗ ಹಸಿವು ನೋವು ಮನೆಯವರಿಗೂ ಉಂಟಾಗುತ್ತಿತ್ತು. ಆದರೆ ಇಂದಿನ ಫಾಸ್ಟ್‌ಫುಡ್ ಯುಗದಲ್ಲಿ ಎಲ್ಲವೂ ಕೈಗೆಟುಕುವ ಸ್ಥಿತಿಯಲ್ಲಿ ದೊರೆಯುತ್ತದೆ. ಈಗಿನವರೆಗೆ ಆಹಾರ ಸಂಗ್ರಹಣೆಯ ಅಗತ್ಯವೂ ಇಲ್ಲ. ಸಂಗ್ರಹ ಮಾಡಿದ್ದೂ ಮುಗಿದರೆ ಭಯವೂ ಇಲ್ಲ.

ಇ. **ಆಟಿ ಕಳೆಂಜ ಆಚರಣೆಯಲ್ಲಿ ಸ್ಥಿತ್ಯಂತರ :-**

ಹಿಂದೆಲ್ಲ ಆಟಿಯ ಅನಿಷ್ಟ ದೂರ ಮಾಡುತ್ತಾ ಆಟಿ ಕಳೆಂಜ ಬರುತ್ತಿದ್ದ. ಇಂದು ಮಂಗಳೂರಿನಂತಹ ಪಟ್ಟಣದಲಿ ಕಟ್ಟಡ ಮಹಡಿಗಳು ಮುಗಿಲನ್ನು ಮುಟ್ಟುವವು ಎಂಬಂತೆ ನಿಂತಿದೆ. ಅಂತಹ ಕಟ್ಟಡ ಮಹಡಿಗಳಲ್ಲೇ ಹಲವು ಅವಿಭಾಜ್ಯ ಕುಟುಂಬಗಳು ವಾಸವಾಗಿವೆ. ಹೀಗಿರುವಾಗ ಆಟಿಕಳೆಂಜ ಅಂತಹ ಕಟ್ಟಡ ಮಹಡಿಗಳಿಗೆ ಹೋಗಲಾಸಾಧ್ಯವಾಗುವುದು. ಒಂದು ವೇಳೆ ಅಂತಹ ಸ್ಥಳಗಳಿಗೂ ಬಂದರು ಒಂದು ಹೊತ್ತಿನಲ್ಲಿ ಒಂದೇ ಮನೆಯಲ್ಲಿರುವ ಎಲ್ಲರೂ ಆಟಿ ಕಳೆಂಜನ ಕುಣಿತ ನೋಡಲು ಆತನಿಂದ ಪ್ರಸಾದ ಸ್ವೀಕರಿಸಲು ಅವರಿಂದ ಅಸಾಧ್ಯವಾಗುವುದು ಎಂದು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ವಾಮನ ನಂದಾವರ – ಸಾಹಿತಿಗಳು ಹೇಳಿದ್ದಾರೆ. ಮಂಗಳೂರಿನಲ್ಲಿ ಆಟಿ ಕಳೆಂಜನ ಆಚರಣೆ ಕುತ್ತಾರು ಪ್ರದೇಶದಲ್ಲಿ ಕಾಣಬಹುದು. ಉಳಿದ ಯಾವ ಪ್ರದೇಶದಲ್ಲಿಯೂ ಅವರು ಆಟಿ ತಿಂಗಳಲ್ಲಿ ಕಾಣಸಿಗುವುದಿಲ್ಲ.





ಮಂಗಳೂರಿನ ಕುತ್ತಾರ್ ಪ್ರದೇಶದಲ್ಲಿ ಮಾತ್ರ ಆಟಿಕಳೆಂಜದ ಪ್ರದರ್ಶನವನ್ನು ಕಾಣಬಹುದು. ಬೇರೆ ಎಲ್ಲೂ ಮಂಗಳೂರಿನಲ್ಲಿ ಆಟಿ ಕಳೆಂಜದ ಪ್ರದರ್ಶನವಿಲ್ಲ. ಬೇರೆ ಎಲ್ಲ ಕಡೆ ಆಟಿಕಳೆಂಜ ವೇದಿಕೆಯಲ್ಲಿ ಯಾವುದಾದರೊಂದು ಕಾರ್ಯಕ್ರಮದಲ್ಲಿ ಕಾಣಸಿಗುತ್ತಾನೆ. ಆದರೆ ಹಿಂದಿನ ಕಾಲದಲ್ಲಿ ಆಟಿಕಳೆಂಜ ಊರಿನ ಕೆಟ್ಟದ್ದೆಲ್ಲ ನಾಶವಾಗಿ, ರೋಗರುಜಿನಗಳೆಲ್ಲ ಮಾಯವಾಗಿ ಒಳ್ಳೆಯ ಸೂಚನೆಗಳ ಸೃಷ್ಟಿಯಾಗಲಿ ಎಂಬ ಉದ್ದೇಶದಿಂದ ಮನೆ ಮನೆ ಹೋಗುತ್ತಿದ್ದನು ಆದರೆ ಇಂದಿನ ಫ್ಯಾಶನ್ ಪ್ರಪಂಚದಲ್ಲಿ ಎಲ್ಲವೂ ಸ್ಥಿತ್ಯಂತರವಾಗುತ್ತ ಹಿಂದಿನ ಆಚರಣೆಗಳ ಸೊಬಗು ಶಕ್ತಿ ಕುಂದುತಿದೆ.

ಹಿಂದಿನ ಕಾಲದಲ್ಲು ಕೂಡು ಕುಟುಂಬವಿತ್ತು ಆಟಿಯ ಸಮಯದಲ್ಲಿ ಜನರಿಗೆ ಬಿಡುವು. ಆ ಸಮಯದಲ್ಲಿ ಆಟಿಕಳೆಂಜ ಮನೆಮನೆಗೆ ಬರುವುದು. ಆ ಸಮಯದಲ್ಲಿ ಕುಟುಂಬಸ್ಥರೆಲ್ಲರೂ ಅದನ್ನು ನೋಡಿ ಸಂತೋಷ ಪಡೆಯುವುದು ಬಳಿಕ ಆಟಿಕಳೆಂಜನಿಗೆ ತಮ್ಮಲ್ಲಿದ್ದದನ್ನು ಸಂತೋಷದಿಂದ ಕೊಡುವುದು ಈ ಪದ್ಧತಿ ಆಟಿಯ ವಿಶೇಷತೆಯನ್ನು ಸಾರುತ್ತದೆ.

ಆದರೆ ಇಂದು ಆಧುನೀಕರಣದ ಅಥವಾ ಕಂಪ್ಯೂಟರ್ ಯುಗದಲ್ಲಿ ನಾವಿದ್ದೇವೆ ಮನುಷ್ಯನಿಗೆ ಯಾವುದಕ್ಕೂ ಸಮಯವಿಲ್ಲ. ಒಂದು ಮನೆಯಲ್ಲಿ ಇಬ್ಬರೂ ಗಂಡ ಹೆಂಡತಿ ಅವರಿಗೊಂದು ಮಗು, ಚಿಕ್ಕ ಕುಟುಂಬ ಮನೆಯ ಹಿರಿಯರನ್ನು ಕುಟುಂಬದಲ್ಲಿ ಕಾಣುವುದು ಇತ್ತೀಚಿನ ದಿನದಲ್ಲಿ ಸಾಧ್ಯವಿಲ್ಲ. ಇಂದಿನ ದುಬಾರಿ ಜೀವನವನ್ನು ಸಾಗಿಸಲು ಗಂಡಹೆಂಡತಿ ಇಬ್ಬರೂ ದುಡಿಯುತ್ತಾರೆ. ಈ ಸಮಯದಲ್ಲಿ ಮನೆಯಲ್ಲಿ ಯಾರಿರುವುದಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಆಟಿಕಳೆಂಜ ಮನೆಮನೆಗೆ ಹೋಗುವುದು ಸಮಂಜಸವೆ? ಈ ಸಮಯದಲ್ಲಿ ಆಟಿಕಳೆಂಜ ವೇಷಧರಿಸಿಕೊಂಡು ಮನೆಮನೆಗೆ ಬರುತ್ತಾನೆ ಎಂದರೆ ಸಂತೋಷ ಸೋಜಿಗವೆರಡು ಆಗುತ್ತದೆ ನಿಜವಾಗಿ ಸೋಜಿಗದ ಮಾತಲ್ಲ ಅದು ನಮ್ಮ ಆಚರಣೆ ಆದರೆ ಇಂದಿನ ಈ ಆಡಂಬರ ಶೈಲಿಯ ಜೀವನಕ್ಕೆ ಹಿಂದಿನ ಎಲ್ಲಾ ಆಚರಣೆಗಳು ಸೋಜಿಗದ ವಿಷಯವೇ ಎಲ್ಲವೂ ಆಗಿರುತ್ತದೆ.

ಕುತ್ತಾರ್ ಪ್ರದೇಶದಲ್ಲಿ ವಾಸವಾಗಿರುವ ತಿಮ್ಮಕ್ಕನವರನ್ನು ಕ್ಷೇತ್ರಕಾರ್ಯದ ಸಮಯದಲ್ಲಿ ಭೇಟಿಯಾದಾಗ ಆಟಿಕಳೆಂಜನ ಕುರಿತು ಸಿಕ್ಕಿದ ಮಾಹಿತಿಗಳು ಈ ಕೆಳಗಿನಂತಿವೆ. ಇಂದು ಆಟಿಕಳೆಂಜನ ಪ್ರದರ್ಶನ ಮಂಗಳೂರಿನಲ್ಲಿ

ಎಲ್ಲೂ ಇಲ್ಲ ನೀವು ಇಂದಿಗೂ ಮಾಡುತ್ತಾ ಇರುವಿರಿ ಎಂದು ಕೇಳಿದಾಗ ತಿಮ್ಮಕ್ಕ ನೀಡಿದ ವಿವರಣೆ, ನಮ್ಮ ಹಿರಿಯರು ಆಚರಣೆ, ಸಂಪ್ರದಾಯಗಳನ್ನು ಬಹಳ ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದರು. ಅದನ್ನೇ ನಾವು ಮುಂದುವಾರಿಸುತ್ತಾ ಇದ್ದೇವೆ. ನಾವು ನಲಿಕೆ ಜನಾಂಗದವರು ಪ್ರತಿವರ್ಷ ಆಟಿಯ ಸಮಯದಲ್ಲಿ ಕಡ್ಡಾಯವಾಗಿ ನಾವು ಆಟಿಕಳೆಂಜನ ವೇಷಧರಿಸಿ ಮನೆಮನೆಗೆ ಹೋಗಲೇಬೇಕು. ಇಲ್ಲಿ ಆಟಿಕಳೆಂಜನನ್ನು ನೇರವಾಗಿ ನೋಡುವ ಭಾಗ್ಯ ಸಿಕ್ಕಿತು. 'ತಿಲಕ್' ಎನ್ನುವ ೧೮ ವರ್ಷದ ಹುಡುಗ ಬಾಲ್ಯದಿಂದಲೆ ಆಟಿಕಳೆಂಜನ ವೇಷಧರಿಸಿಕೊಂಡು ಮನೆಮನೆಗೆ ಹೋಗುತ್ತಾನೆ. ನಾನು ಅವನು ನಲಿಯುವಾಗ ಡೋಲು ಬಡಿದು ಪಾಡ್ದಾನವನ್ನು ಹಾಡುತ್ತೇನೆ ಎಂದರು.



ಆಟಿ ಸಮಯದಲ್ಲಿ ನಾನು ಕೆಲಸಕ್ಕೆ ರಜೆ ಹಾಕುತ್ತೇನೆ ನಮಗೆ ಆಟಿಕಳೆಂಜ ಧರಿಸಿ ಪ್ರದರ್ಶನ ನೀಡುವುದು ಕಡ್ಡಾಯ ಎಂದರು. ಒಂದು ರೀತಿಯಲ್ಲಿ ಯೋಚಿಸಿದರೆ ಈ ತಿಂಗಳನಲ್ಲಿ ಅವರಿಗೆ ಒಳ್ಳೆಯ ಆದಾಯ ಎಂದರೆ ತಪ್ಪಾಗಲಾರದು. ಯಾಕೆಂದರೆ ಅವರ ಜೊತೆ ಮನೆಮನೆಗಳಿಗೆ ಭೇಟಿ ನೀಡಿದಾಗ ಅವರಿಗೆ ಅಕ್ಕಿ, ತರಕಾರಿ, ತೆಂಗಿನಕಾಯಿ, ೫೦೦, ೧.೦೦೦/- ರೂಪಾಯಿ ಹಣವನ್ನು ನೀಡುತ್ತಿದ್ದರು. ಆಟಿಯ ಸಮಯದಲ್ಲಿ ಒಂದು ದಿನದಲ್ಲಿ ೩.೦೦೧ ದವರೆಗೂ ತಮಗೆ ಹಣ ಸಿಗುತ್ತದೆ, ಆದ್ದರಿಂದ ನಮ್ಮ ಹೊಟ್ಟೆಪಾಡಿಗೆ ತೊಂದರೆಯಿಲ್ಲ ಆದರೆ ಈ ತಿಂಗಳು ಮುಗಿದ ಬಳಿಕ ನಾನು ಮನೆಯಲ್ಲೇ ಇರುತ್ತೇನೆ ಎಂದರು ತಿಮ್ಮಕ್ಕ. ಆಟಿಯ ಕಾಲ ಕಷ್ಟದ ಕಾಲ ಆದರೆ ಒಂದು ರೀತಿಯಲ್ಲಿ ನೋಡಿದರೆ ಈ ಆಟಿಯ ಕಾಲದಲ್ಲಿ ನಮಗೆ ಏನಾದರೂ ನಮ್ಮ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಸಹಾಯವಾಗುತ್ತದೆ ಎಂದರು. ಆಟಿಕಳೆಂಜ ವೇಷ ಧರಿಸಿ ಮನೆಮನೆಗೆ ಹೋಗುವುದು ಅವರು ನೀಡಿದ್ದನ್ನು ಸಂತೋಷದಿಂದ ಸ್ವೀಕರಿಸುವುದು ನೋಡಿದರೆ ಆ ಕಾಲದ ಸಂಸ್ಕೃತಿಯ ಸೊಬಗನ್ನು ನೆನಪಿಸುವುದು. ಈ ನಿಟ್ಟಿನಲ್ಲಿ ಇವರನ್ನು ಮೆಚ್ಚಲೇ ಬೇಕು. ಆಟಿಯ ಮೊದಲ ದಿನದಂದು ಇವರು ತಮ್ಮ ಗ್ರಾಮದ ದೈವಸ್ಥಾನಕ್ಕೆ ಮೊದಲು ಹೋಗಿ ಕುಣಿಯುವುದು ರೂಢಿ. ಮೊದಲು ಕುತ್ತಾರ್‌ಗುತ್ತು ದೈವ ಸ್ಥಾನಕ್ಕೆ ಹೋಗಿ ಅಲ್ಲಿಂದ ಪಂಜದಯ ದೈವ (ಭಂಡಾರದ ಮನೆ)ಯಲ್ಲಿ ಅಲ್ಲಿಂದ ಮಾಗಣೆಗೆ ಹೋಗಿ ಕಲ್ಲಲ್ಲಗುತ್ತು ದೈವಸ್ಥಾನಕ್ಕೆ ಹೋಗಿ ನಲಿಯುವುದು ಕ್ರಮ. ಬಳಿಕ ಆಟಿಕಳೆಂಜನ ಪ್ರಯಾಣ ಮನೆಮನೆಗೆ.



ಕೆಲವರೆಲ್ಲ ಈಗ ಆಟಿಕಳೆಂಜನ ವೇಷ ಧರಿಸಿ ಮನೆಮನೆಗೆ ಹೋಗುವ ಕ್ರಮವನ್ನು ನಿಲ್ಲಿಸಿದ್ದಾರೆ. ಯಾಕೆಂದರೆ ಅವರಿಗೆಲ್ಲಾ ಈಗ ಬೇರೆ ಬೇರೆ ರೀತಿಯ ಉದ್ಯೋಗಗಳಿವೆ. ಅಲ್ಲದೇ ಸರ್ಕಾರದಿಂದ ನಾನಾ ರೀತಿಯ ಸೌಲಭ್ಯಗಳಿರುವುದರಿಂದ ತಮ್ಮ ತಮ್ಮ ಕೆಲಸದಲ್ಲಿ ಯುವ ಪೀಳಿಗೆ ತೊಡಗಿದೆ.

ಆದರೆ ತಿಮ್ಮಕ್ಕರವರು ಬೇರೆಯವರು ಎಷ್ಟು ಕಟ್ಟುನಿಟ್ಟಾಗಿ ಇದ್ದಾರೆ ಗೊತ್ತಿಲ್ಲ ಆದರೆ ನಾವು ಮಾತ್ರ ಹಿಂದಿನ ಕಾಲದ ಆಟಿಯ ಈ ವಿಶೇಷ ಆಚರಣೆಯನ್ನು ಮುಂದುವರಿಸುತ್ತಾ ಇದ್ದೇವೆ. ಹೊಟ್ಟೆಪಾಡು ಒಂದು ಕಡೆ ಆದರೆ ಅದನ್ನು ಕಡ್ಡಾಯವಾಗಿ ಮಾಡಲೇಬೇಕಾದ ನಿಯಮಗಳಿವೆ. ಕಾರಣಾಂತರಗಳಿಂದ ಒಂದು ವರ್ಷ ನಾವು ಆಟಿಕಳೆಂಜನ ವೇಷ ಧರಿಸಲಿಲ್ಲ. ಈ ಸಮಯದಲ್ಲಿ ನಮ್ಮ ಊರಿನಲ್ಲಿ ಕೆಲವೊಂದು ತೊಂದರೆಗಳುಂಟಾಗಿ ದೈವಸ್ಥಾನದಲ್ಲಿ ಪ್ರಶ್ನೆಯಿಟ್ಟು ಕೇಳಿದಾಗ ಆಟಿಕಳೆಂಜ ಹಾಕಿದ್ದರ ಪರಿಣಾಮವಾಗಿ ಹೀಗೆ ಆಯಿತು ಎಂದು ಹೇಳಿದರು ತಿಮ್ಮಕ್ಕ ಇಲ್ಲಿ ನಾವು ಗಮನಿಸಲೇಬೇಕಾದ ಸಂಗತಿಯೇನೆಂದರೆ ಆಟಿಕಳೆಂಜನ ಆಚರಣೆ ಕೇವಲ ಹೊಟ್ಟೆಪಾಡಾಗಲೀ ಅಥವಾ ಪದ್ಧತಿಯಾಗಲೀ ಅಲ್ಲ ಆಟಿಕಳೆಂಜನ ಆಚರಣೆ ಒಂದು ಬಲವಾದ ನಂಬಿಕೆ.

ಹಿಂದಿನ ಕಾಲದಲ್ಲಿ ಆಟಿಕಳೆಂಜನ ಆಚರಣೆಯೆಂದರೆ ಅದೇನೂ ವಿಶೇಷವಲ್ಲ. ಆದರೆ ಇಂದಿನ ಈ ಆಧುನಿಕ ಜಗತ್ತಿನಲ್ಲಿ ಆಗಿನ ಕಾಲದ ಎಲ್ಲಾ ಆಚರಣೆಗಳೂ ವಿಶೇಷ ಎಲ್ಲರಿಗೂ ಸೋಜಿಗವನ್ನುಂಟು ಮಾಡುವ ಸಂಗತಿ. ಆಟಿಕಳೆಂಜನ ನಲಿಕೆಯನ್ನು, ಪಾಡ್ದನ ಹಾಡುವ ರೀತಿಯನ್ನು ಅವರ ಜೊತೆಯೇ ಹೋಗಿ ವೀಕ್ಷಿಸಿದಾಗ ಸುತ್ತಮುತ್ತ ಇರುವ ಜನರ ಆಸಕ್ತಿಯನ್ನು ಕಂಡು ಸಂತೋಷವಾಯಿತು. ಮಕ್ಕಳಿಂದ ಹಿಡಿದು ಹಿರಿಯರು ಕೂಡ ಓಡಿ ಬಂದು ಅದನ್ನು ನೋಡುವುದು, ತಮ್ಮ ಮೊಬೈಲ್‌ಗಳಲ್ಲಿ ಅದನ್ನು ಚಿತ್ರೀಕರಣ ಮಾಡುವುದು. ಅವರ ಕುತೂಹಲವನ್ನು ಮೆಚ್ಚಲೇ ಬೇಕು. ಮೇಲೆ ಬರುವಂತಹ ಸೋಜಿಗ ಎನ್ನುವ ಪದದ ಬಳಕೆಗೆ ಈ ವಿಷಯವು ಸಮರ್ಥನೆಯನ್ನು ನೀಡುತ್ತದೆ. ಯಾಕೆಂದರೆ ನಮ್ಮ ನಾಡಿನ ಎಲ್ಲಾ ಆಚರಣೆಗಳು ಇಂದು ಮೊಬೈಲ್‌ನಲ್ಲಿ ಮಾತ್ರ ನೋಡಬೇಕಾದ ವಿಪತ್ತಿಗೆ ಒಳಗಾಗಿವೆ. ಆಟಿಕಳೆಂಜನ ಆಚರಣೆ ಮಂಗಳೂರಿನಲ್ಲಿ ಕಾಣಲೂ ಸಿಗುವುದಿಲ್ಲ. ಮಂಗಳೂರಿನ ಒಂದು

ಹಳ್ಳಿ ಪ್ರದೇಶದಲ್ಲಿ ಈ ಆಚರಣೆ ಕಾಣಸಿಕ್ಕಾಗ ಅದೂ ಸೋಜಿಗವೂ ಹೌದು. ವಿಶೇಷವೂ ಹೌದು. ಇಲ್ಲಿ ಯಾವ ರೀತಿ ಆಚರಣೆಗಳು ಜೀವನಶೈಲಿ ಸ್ಥಿತ್ಯಂತರಕ್ಕೆ ಒಳಗಾಗಿದೆ ಎನ್ನುವುದನ್ನು ಗಮನಿಸಲೇಬೇಕು. ಆಟಿ ಕಳೆಂಜ ನಗರ ಪ್ರದೇಶಗಳಲ್ಲಿ ಯಾಕಿಲ್ಲ? ಎಂದಾಗ ತಿಮ್ಮಕ್ಕ ಹೇಳಿದ್ದು ಹೀಗೆ ನಾವು ನಗರಗಳಿಗೆ ಹೋದಾಗ ಅಲ್ಲಿ ಹೆಚ್ಚಿನ ಮನೆಗಳು ಮುಚ್ಚಿರುತ್ತದೆ. ಅವರೆಲ್ಲರೂ ಕೆಲಸಕ್ಕೆ ಹೋಗಿರುತ್ತಾರೆ. ನಾವು ಎಷ್ಟೋ ಸಲ ಹಿಂದೆ ಬಂದದ್ದು ಇದೆ. ಯಾವುದೋ ವೇಷ ಬಂದಂತೆ ಜನರು ವರ್ತಿಸುತ್ತಾರೆ ಬಂದಿರುವುದು ಆಟಿಕಳೆಂಜ ಎನ್ನುವುದನ್ನು ಗುರುತಿಸಲು ನಗರ ಪ್ರದೇಶದ ಜನರಿಗೆ ಅಸಾಧ್ಯ ಎಂದರು. ಯಾಕೆಂದರೆ ಎಲ್ಲರೂ ಅವರವರ ಕೆಲಸದಲ್ಲಿರುವುದರಿಂದ ನಗರಗಳಲ್ಲಿ ಅದರಲ್ಲೂ ಮಂಗಳೂರಿನಂತಹ ವಾಹನ ತುಂಬಿರುವಂತಹ ಸಿಟಿಗಳಲ್ಲಿ ಆಟಿಕಳೆಂಜ ಬಂದರೆ ಗುರುತಿಸುವವರಾರು? ಇಲ್ಲಿ ತಿಮ್ಮಕ್ಕ ಹೇಳಿದ ಒಂದು ಮಾತನ್ನು ನೆನಪಿಸುವುದು ಸೂಕ್ತ. ನನ್ನ ಹಿರಿಯರು ಪಾಲಿಸುತ್ತಿದ್ದ ಪದ್ಧತಿಯನ್ನು ನಾನು ಮುಂದುವರಿಸುತ್ತಾ ಇದ್ದೇನೆ ಆದರೆ ನನ್ನ ಮುಂದಿನ ಪೀಳಿಗೆ ಮಾಡುತ್ತಾರೋ ಇಲ್ಲವೋ? ಎನ್ನುವುದು ಊಹಿಸುವುದು ಕಷ್ಟ ಎಂದರು. ನಿಜಕ್ಕೂ ತಿಮ್ಮಕ್ಕನ ಈ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳುವುದು ಕಷ್ಟ. ಆಟಿಯ ಸಮಯದಲ್ಲಿ ಊರಿನ ಮಾರಿಯನ್ನು ಓಡಿಸಲು ಬರುವಂತಹ ಈ ವಿಶಿಷ್ಟ ಆಚರಣೆ ಮುಂದುವರಿಯಲಿ ಸಂಪ್ರದಾಯ ಉಳಿಯಲಿ ಎನ್ನುವುದೇ ಎಲ್ಲರ ಆಶಾವಾದ.

ಮನೆಮನೆಯಲ್ಲಿ ಆಟಿ ಕಳೆಂಜನಿಗೆ ನೀಡುತ್ತಿದ್ದ ಹಣದ ಕುರಿತು ಮನೆಯವರಲ್ಲಿ ಕೇಳಿದಾಗ ನಾವು ರೂ. ೫೦೦, ೧೦೦೦ ಕೊಡುತ್ತೇವೆ ಯಾಕೆಂದರೆ ಅವರು ಅಷ್ಟೊಂದು ಕಷ್ಟಪಟ್ಟು ಬರುತ್ತಾರೆ. ಈಗಲೂ ನಂಬಿಕೆಗಳನ್ನು ಆಚರಣೆಗಳನ್ನು ಉಳಿಸುತ್ತಿದ್ದಾರೆ. ಅದಕ್ಕೆ ನಾವು ಅವರಿಗೆ ಗೌರವಧನ ನೀಡುತ್ತೇವೆ ಎಂದರು.

**ಈ. ಸ್ಥಿತ್ಯಂತರಗೊಂಡಿರುವ ಆಟಿಯ ನಂಬಿಕೆಗಳು :-**

ಆಟಿಯ ಕುರಿತ ನಂಬಿಕೆಗಳು ಮಾತ್ರ ಸ್ವಲ್ಪ ಮಟ್ಟಿಗೆ ಜೀವಂತವಾಗಿದೆ ಎನ್ನಬಹುದು. ಆಟಿಯ ಕಾಲದ ನಂಬಿಕೆಗಳಿಗೆ ವೈಜ್ಞಾನಿಕ ಹಾಗೂ ಧಾರ್ಮಿಕ ಕಾರಣಗಳಿವೆ. ಆಟಿಕುಲ್ಲುನಿ, ಅತವಾ ಹಾಲೆರಸ ಕುಡಿಯುವುದು ಇತ್ಯಾದಿ.

ಆದರೆ ಇಂದಿನ ಪೀಳಿಗೆ ಯಾವ ಕಾರಣಗಳನ್ನು ತಿಳಿಯುವ ಆಸಕ್ತಿಯಾಗಲೀ, ಸಮಯವಾಗಲೀ ಪ್ರತ್ಯೇಕವಾಗಿ ಹೊಂದಿಲ್ಲ. ಆಟಿ ಕುಲ್ಲುನಿ ಯಾಕೆಂದರೆ ಗಂಡ ಹೆಂಡತಿ ಒಟ್ಟಿಗೆಯಾಗಿ ಮಗು ಜನಿಸಿದರೆ ಆ ಮಗು ಬುದ್ಧಿಮಾಂದ್ಯ ಅಥವಾ ಅಂಗವಿಕಲ ಮಗುವಾಗಿ ಜನಿಸುತ್ತದೆ ಎನ್ನುವುದನ್ನು ಹೇಳಿದರು ಅದಕ್ಕೆ ಎನ್ನುತ್ತಾರೆ ಈ ಆಚರಣೆಯನ್ನಂತೂ ಯಾರೂ ಕಟ್ಟುನಿಟ್ಟಾಗಿ ಪಾಲಿಸುವುದಿಲ್ಲ. ಆದ್ದರಿಂದ ಅದರ ಕುರಿತು ಸಂಶೋಧನೆ ಅಥವಾ ತಿಳಿದುಕೊಳ್ಳುವ ಆಸಕ್ತಿ ಯಾರಿಗೂ ಇಲ್ಲ ಅದೊಂದು ಆ ಕಾಲದ ನಂಬಿಕೆ ಎಂದು ನಾಮ ಮಾತ್ರ ಮಾಡುತ್ತಾರಷ್ಟೇ.

ಆಟಿಯ ಕಾಲ ಅನಿಷ್ಟದ ಕಾಲ ಎಂದು ಆ ಕಾಲದಲ್ಲಿ ಹೇಳಲ್ಪಡುತ್ತಿತ್ತು. ಅದನ್ನು ಈಗಲೂ ಜನರು ಬಲವಾಗಿ ನಂಬಿದ್ದಾರೆ. ಶುಭಕಾರ್ಯಗಳೂ ಯಾವುದೂ ಸಾಮಾನ್ಯವಾಗಿ ಅವರು ಎಷ್ಟೇ ವಿದ್ಯಾವಂತರಾಗಲೀ ಮಾಡುವುದು ಕಂಡುಬರುವುದು ವಿರಳ. ಮಂಗಳೂರಿನ ಬಸ್ಸಿನಲ್ಲಿ ಪ್ರಯಾಣಿಸುತ್ತಿರುವಾಗ ಮೊದಲನೆಯ ಸೀಟಿನಲ್ಲಿ

ಕುಳಿತುಕೊಂಡಿದ್ದರಿಂದ ಬಸ್ಸಿನ ಚಾಲಕ ಮತ್ತು ಅವನ ಗೆಳೆಯನ ನಡುವಿನ ಸಂಭಾಷಣೆ ಸರಿಯಾಗಿ ಕೇಳಿಸುತ್ತಿತ್ತು. ಅವರ ಸಂಭಾಷಣೆ 'ಆಟಿಯ' ಕುರಿತು ಆಗಿದ್ದರಿಂದ ನನ್ನ ಕಿವಿ ಪೂರ್ತಿ ಅವರ ಸಂಭಾಷಣೆಯತ್ತ ತಿರುಗಿತು. ಚಾಲಕನಲ್ಲಿ ಆತನ ಗೆಳೆಯ ನಾನೊಂದು ಕಾರು ೨ ತಿಂಗಳ ಮೊದಲು ತಗೊಂಡೆ. ಈಗ ನನಗೆ ಹಣದ ತೊಂದರೆಯಿರುವುದರಿಂದ ನೀನು ಬೇಕಾದರೆ ತೆಗೋ ಎಂದಾಗ ಚಾಲಕ ನಾನು ಒಂದು ಕಾರು ತೆಗೆದುಕೊಳ್ಳುವ ಅಲೋಚನೆಯಲ್ಲಿಯೇ ಇದ್ದೇನೆ ಎಂದ. ತಕ್ಷಣ ಆತನ ಗೆಳೆಯ ಸಂತೋಷಗೊಂಡು ಹಾಗಾದರೆ ನಾಳೆ ನಾನು ಕಾರು ತರುತ್ತೇನೆ ಎಂದು ಹಣದ ಕುರಿತು ಎಲ್ಲಾ ಚರ್ಚೆಗಳಾದವು. ಕೊನೆಗೆ ಚಾಲಕ ಆದರೆ ಈಗ ಈ ತಿಂಗಳು ಕಾರು ಬೇಡ ಎಂದ ಯಾಕೆಂದರೆ ಈಗ ಆಟಿ ತಿಂಗಳು ಈ ತಿಂಗಳಲ್ಲಿ ಯಾವ ಕಾರ್ಯ ಬೇಡ ಎಂದ. ಈ ಘಟನೆಯಿಂದಾಗಿ ಆಟಿಯ ತಿಂಗಳು ಅನಿಷ್ಟದ ತಿಂಗಳು ಎನ್ನುವುದನ್ನು ಜನರು ಬಹಳ ನಂಬಿ ಅದನ್ನು ಅದೆ ರೀತಿ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ ಎನ್ನುವುದು ಗಮನಕ್ಕೆ ಬಂತು. ಅದೇ ರೀತಿ ಹೆಣ್ಣು ಮಕ್ಕಳು ವಯಸ್ಸಿಗೆ ಬಂದರೆ ೭ ದಿನದ ಬಳಿಕ ಆಕೆ ದೇವಸ್ಥಾನದಲ್ಲಿ ತೀರ್ಥಸ್ನಾನ ಮೀಯಬೇಕು ಎನ್ನುವುದೊಂದು ನಂಬಿಕೆ. ಆದರೆ ಅದನ್ನೂ ಆಟಿ ತಿಂಗಳಲ್ಲಿ ಕಡ್ಡಾಯವಾಗಿ ಮಾಡಲೇಬಾರದು ಯಾಕೆ? ಎಂದು ಪ್ರಶ್ನಿಸಿದಾಗ ಅದು ಹುಡುಗಿಗೆ ಮುಂದೆ ಶ್ರೇಯಸ್ಕರವಲ್ಲ ಎಂದು ಹೇಳಿದರೂ ಈ ರೀತಿ ಆಟಿ ತಿಂಗಳು ಅನಿಷ್ಟದ ಕಾಲ ಎನ್ನುವುದನ್ನು ಇಂದಿಗೂ ಜನ ನಂಬಿದ್ದಾರೆ.

ಅದೇ ರೀತಿ ಆಟಿ ತಿಂಗಳಿನಲ್ಲಿ ಹಿರಿಯರಿಗೆ, ಭೂತಗಳಿಗೆ, ಅಗೆಲು ಬಡಿಸುವ ಕ್ರಮವನ್ನು ಮಾಡುತ್ತಾರೆ. ಸುರತ್ಕಲ್‌ನ ತೋಕೂರು, ಮಾಗಣೆ ಗ್ರಾಮದ ಗುತ್ತು ಮನೆಯಲ್ಲಿ ಆಟಿಯ ಅಗೆಲು ಬಡಿಸುವ ಕ್ರಮವನ್ನು ಮಾಡುತ್ತಾರೆ ಎನ್ನುವುದು ಗಮನಾರ್ಹ. ಗುತ್ತುಮನೆ ಎಂದು ಕರೆಯಲ್ಪಡುವ ದೊಡ್ಡಮನೆಗಳಲ್ಲಿ ಈ ಸಂಪ್ರದಾಯ ಇಂದಿಗೂ ನೆರವೇರುತ್ತದೆ.

ಅದೇ ಆಟಿಯ ಅಮವಾಸ್ಯೆಯ ದಿನ ಎಲ್ಲ ಮನೆಗಳಲ್ಲಿ ಹಿರಿಯರಿಗೆ ಬಡಿಸುವ ಕ್ರಮವಿದೆ. ತಮ್ಮ ತಮ್ಮ ಅಂತಸ್ತಿಗೆ ತಕ್ಕಂತೆ ಈ ಕ್ರಮ ನೆರವೆರುತ್ತದೆ. ಈ ರೀತಿಯಾಗಿ ಆಟಿಯ ಕಾಲದ ಕುರಿತಾದ ನಂಬಿಕೆಗಳು ಇಂದಿಗೂ ಹೊಸ ಸ್ವರೂಪದಲ್ಲಿ ನೆರವೇರುತ್ತದೆ. ಆದರೆ ಈ ನಂಬಿಕೆಗಳ ಹಿಂದಿನ ಕಾರಣಗಳನ್ನು ಅರಿತವರು ಬೆರಳೆಣಿಕೆಯಷ್ಟು ಎನ್ನುವುದು ವಿಪರ್ಯಾಸ.

ಆಟಿ ತಿಂಗಳು ಅನಿಷ್ಟದ ಕಾಲವಾದರೂ ಕೂಡ ಆಟಿ ತಿಂಗಳಿಂದಾಗಿ ಜನರಿಗೂ ಒಂದು ಪ್ರಯೋಜನವೂ ಇದೆ. ಚಿನ್ನದ ಅಂಗಡಿಯಲ್ಲಿ ಬಟ್ಟೆ ಅಂಗಡಿಗಳಲ್ಲಿ ಇಂದು 'ಆಟಿ ಆಫರ್' ಎಂದು ಕಡಿಮೆ ಬೆಲೆಯಲ್ಲಿ ಮಾರಾಟ ಮಾಡುತ್ತಿದೆ.

ಅದೇ ರೀತಿ 'ಮಲಬಾರ್ ಗೋಲ್ಡ್'ನ ಒಂದು ಜಾಹೀರಾತನ್ನು ಗಮನಿಸಿದಾಗ ಆಟಿ ಅನಿಷ್ಟದ ಕಾಲ ಎಂದು ನಂಬಿರುವ ಜನರಿಗೆ ಒಂದು ರೀತಿಯ ಉತ್ತರ ಸಿಕ್ಕಂತಾಗುತ್ತದೆ. ಆ ಜಾಹೀರಾತಿನಲ್ಲಿ ತಂದೆ ಮಗಳಿಗೆ ಚಿನ್ನವನ್ನು ಉಡುಗೊರೆಯಾಗಿ ಕೊಟ್ಟಾಗ ಮಗಳು "ಅಪ್ಪ ಇಂದು ಆಟಿ ತಿಂಗಳು" ಎಂದಾಗ ಅಪ್ಪ "ನಿನಗೆ ಕೆಲಸ ಸಿಕ್ಕಿದ್ದು ಕೂಡ ಆಟಿ ತಿಂಗಳಿನಲ್ಲಿ" ಎನ್ನುತ್ತಾನೆ. ಇಲ್ಲಿ ಆಟಿ ತಿಂಗಳನ್ನು ಅನಿಷ್ಟದ ಕಾಲ ಎಂದು ಆ ಕಾಲದಲ್ಲಿ ಹೇಳುತ್ತಿದ್ದುದರ

ವೈಜ್ಞಾನಿಕ ಕಾರಣವನ್ನು ಹುಡುಕಿದರೆ ಮಾತ್ರ ನಿಜ ವಿಷಯ ಸಿಗುತ್ತದೆ. ನಂಬಿಕೆಗಳನ್ನು ಪ್ರಶ್ನೆ ಮಾಡಿ ಮತ್ತೆ ಅದನ್ನು ನಂಬಿದರೆ ಅದು ಅರ್ಥಪೂರ್ಣ ಅದು ಕೇವಲ ಸಂಶೋಧಕರ ಕೆಲಸ ಮಾತ್ರ ಆಗಿರುವುದಿಲ್ಲ.

**ಆಟಿ ಕುಲ್ಲುನಿ**

ಆಟಿ ಕುಲ್ಲುನಿ ಹಿಂದಿನಿಂದಲೂ ಬಂದ ಆಚರಣಾತ್ಮಕ ಸಂಪ್ರದಾಯ. ಅದಕ್ಕೆ ಅದರದೇ ಆದ ರೀತಿ ನೀತಿ ರಿವಾಜುಗಳಿವೆ. ಆದರೆ ಇಂದು ಈ ಆಟಿ ಕುಲ್ಲುನಿ (ಆಟಿಯಲ್ಲಿ ಹೆಣ್ಣು ತವರಿಗೆ) ಎಂಬ ಆಚರಣೆ ಕೇವಲ ಸಂಪ್ರದಾಯವೆಂಬ ಕಾರಣಕ್ಕಾಗಿ ಮಾತ ಅನುಸರಿಸುತ್ತಾರೆ. ಈ ಸಂಪ್ರದಾಯದ ಹಿಂದಿನ ತಿರುಳು ಈಗಿನ ಪೀಳಿಗೆಗೆ ತಿಳಿದಿಲ್ಲ. ಕ್ಷೇತ್ರ ಕಾರ್ಯದ ಸಂದಭದಲ್ಲಿ ಈ ಕುರಿತು ಇತ್ತೀಚೆಗೆ ಮದುವೆಯಾದ ಓರ್ವ ಹೆಣ್ಣು ಮಗಳಲ್ಲಿ ಕೇಳಿದಾಗ, "ನಾನು ತಾಯಿ ಮನೆಗೆ ಹೋಗಲಿಲ್ಲ ತವರು ಮನೆಯವರು ನನ್ನನ್ನು ಕರೆದಿಲ್ಲ ಅವರು ಕರೆಯುವುದಾದರೆ ಮಾತ್ರ ನಾನು ಹೋಗುವುದು ಎಂದು ಗಾಯತ್ರಿ ರಾಕೇಶ್ ಉತ್ತರಿಸಿದರು. ಆಟಿಯ ತಿಂಗಳಲ್ಲಿ ಸೃಷ್ಟಿಯ ಕ್ರಿಯೆ ನಡೆಯಬಾರದು ನಡೆದಲ್ಲಿ ಮದುವೆಯಾದ ಹೆಣ್ಣು ಮಗಳಿಗೆ ಮುಂದೆ ಬೇಸಿಗೆಯಲ್ಲಿ ಮಗು ಹುಟ್ಟುತ್ತದೆ. ಹವಾಮಾನದಲ್ಲಿ ಏರುಪೇರಾಗುವ ಪರಿಸ್ಥಿತಿ ಇರುವಾಗ ಅದು ತಾಯಿ ಮಗುವಿಗೆ ಒಳ್ಳೆಯದಲ್ಲ ಎಂಬ ಕಾರಣಕ್ಕಾಗಿ ಈ ಆಚರಣೆ ಸಂದರ್ಭದಲ್ಲ ನಡೆಯುತ್ತಿತ್ತು ಆದರೆ ಇಂದು ಮುಂದುವರಿದ ತಂತ್ರಜ್ಞಾನದಿಂದಾಗಿ ಈ ಎಲ್ಲಾ ಸಮಸ್ಯೆಗಳಿಗೂ ಪರಿಹಾರ ಕಂಡುಕೊಳ್ಳಲಾಗಿದೆ. ಹಾಗಾಗಿ ಈ ಆಟಿ ಕುಲ್ಲುನಿ ಎಂಬ ಆಚರಣೆಗಳು ಹಿಂದಿನ ಸ್ವರೂಪವನ್ನು ಕಳೆದುಕೊಂಡು ಹೊಸ ಮುಖವಾಡವನ್ನು ಧರಿಸಿ ನಿಂತಿದೆ. ಕ್ಷೇತ್ರಕಾರ್ಯದ ಸಮಯದಲ್ಲಿ ಭೇಟಿ ನೀಡಿದ ಮನೆಗಳಲ್ಲಿ ಗಂಡ ಹೆಂಡತಿ ಮಗುವಿದ್ದು, ಆಟಿಯ ಈ 'ಆಟಿ ಕುಲ್ಲುನಿ' ಆಚರಣೆಯ ಕುರಿತು ತೊಕ್ಕೊಟ್ಟು ಪ್ರದೇಶದ ನಿವಾಸಿಯಾಗಿರುವ ನಿತಿನ್ ಸುಮ ದಂಪತಿಗಳಲ್ಲಿ ಮಾತನಾಡಿದಾಗ 'ಅಟಿಕುಲ್ಲುನಿ' ಸೋಮವಾರ ಹೋಗಿ ಮಂಗಳವಾರ ಬರುವುದು ಎಂದರು. ಯಾಕೆಂದರೆ ಸುಮಳ ಅಮ್ಮನ ಮನೆ ಕಿನ್ನಿಗೋಳಿ ಪ್ರದೇಶದ ನಿಡ್ಡೋಡಿ ಎಂಬ ಗ್ರಾಮದಲ್ಲಿ. ಆಕೆಗೆ ತುಂಬಾ ದಿನ ಅಲ್ಲಿ ನಿಂತರೆ ಕೆಲಸಕ್ಕೆ ಹೋಗಲು ಕಷ್ಟವಾಗುತ್ತದೆ ಹಾಗೂ ರಜೆ ಸಿಗುವುದಿಲ್ಲ ಎಂದರು. ಹೋಗಬೇಕು ಎನ್ನುವ ಆಟಿಯ ಸಂಪ್ರದಾಯಕ್ಕೆ ಹೋಗುವುದು ಎಂದರು. ಇಲ್ಲಿ ಆಚರಣೆಗಳನ್ನು ಅಷ್ಟರ ಮಟ್ಟಿಗಾದರೂ ಮುಂದುವರಿಸುತ್ತಿದ್ದರಲ್ಲ ಎಂದು ತೃಪ್ತಿಪಟ್ಟುಕೊಳ್ಳಬೇಕಷ್ಟೇ ಮರುಭೂಮಿಯಲ್ಲಿ ಸಿಕ್ಕ ನೀರಂತೆ.

ಹಾಸ್ಯಸ್ಪದ ಘಟನೆಯೆಂದರೆ ಕ್ಷೇತ್ರಕಾರ್ಯದ ಸಮಯದಲ್ಲಿ ಶಕ್ತಿನಗರ ಪ್ರದೇಶದ ನಿವಾಸಿ ಹೊಸತಾಗಿ ಮದುವೆಯಾದ ಅಕ್ಷತಾಳಲ್ಲಿ ಈ ವರ್ಷದ 'ಆಟಿಕುಲ್ಲುನಿ' ಆಚರಣೆಯ ಕುರಿತು ಕೇಳಿದಾಗ ಮದುವೆಯಾಗಿ ಒಂದು ತಿಂಗಳ ನಂತರ ತಾಯಿ ಮನೆಯಲ್ಲೇ ಇದ್ದೇನೆ ಎಂದರು. ("ಇಡೀ ವರ್ಷ ಆಟಿ ಕುಲ್ಲೊಂದು ಉಲ್ಲೇ") ಇಡೀ ವರ್ಷ 'ಆಟಿಕುಲ್ಲುನಿ' ಆಚರಣೆ ಮಾಡುತ್ತೇನೆ ಹೇಳಿ ನಕ್ಕರು. ತನ್ನ ಗಂಡ ವಿದೇಶದಲ್ಲಿರುವುದರಿಂದ ಅತ್ತೆ ಮಡಿಕೇರಿಯಲ್ಲಿ ತನಗೆ ಕೆಲಸ ಮಂಗಳೂರಿನಲ್ಲಿರುವುದರಿಂದ ಇಲ್ಲೇ ತಾಯಿ ಜೊತೆ ಇದ್ದೇನೆ ಎಂದರು. ಈ ಕ್ಷೇತ್ರಕಾರ್ಯದಲ್ಲಿ ಸಿಕ್ಕಿದ ಫಲಿತಾಂಶದ ಪ್ರಕಾರ ಇಂದಿನ ಪೀಳಿಗೆ ಆಚರಣೆಗಳನ್ನು ಮರೆಯುತ್ತಿದ್ದಾರೋ ಅಥವಾ ಆಧುನಿಕ ದುಬಾರಿ ಜೀವನದ ಒತ್ತಡದಿಂದ ಬೇರೆ ವಿಧಿಯಿಲ್ಲದೆ ಒತ್ತಡಕ್ಕೆ ಮಣಿದು ಈ ರೀತಿ ಆಗುತ್ತಿದೆಯೋ ಎಂದು ನಮ್ಮನ್ನು ನಾವೇ

ಕೇಳಿಕೊಳ್ಳುವುದು ಸೂಕ್ತ ಎಂದೆನಿಸುತ್ತದೆ. ಕೆಲವೊಂದು ಮನೆಯಲ್ಲಿ ಇಂದು ಗಂಡ ಹೆಂಡತಿಯ ಮನೆಯಲ್ಲೇ ಉಳಿದುಕೊಳ್ಳುವುದು ಕಾಣಸಿಗುತ್ತದೆ. ಮುಲ್ಕಿಯ ಒಂದು ಪ್ರದೇಶದಲ್ಲಿ ಕ್ಷೇತ್ರಕಾರ್ಯದ ಸಮಯದಲ್ಲಿ ಆಟಿಕುಲ್ಲುನಿ ಆಚರಣೆಯ ಕುರಿತು ಒಂದು ಸಂಗತಿ ಸಿಕ್ಕಿತು. ಗಂಡ ಹೆಂಡತಿಯನ್ನು ಆಟಿ ಕುಲ್ಲುನಿ ಆಚರಣೆಯ ನಿಮಿತ್ತ ತವರು ಮನೆಗೆ ಕಳುಹಿಸುವಾಗ ಆಕೆಗೆ ವಿಜೃಂಭಣೆಯ ಊಟ ಬಡಿಸಿ ಊರವರಿಗೆಲ್ಲ ಕರೆದು ವಿಜೃಂಭಣೆಯಿಂದ ತಾಯಿ ಮನೆಗೆ ಕಳುಹಿಸುವುದು. ನಮಗೆ ಇದು ಹಾಸ್ಯಸ್ಪದವಾಗಿ ಕಂಡರೂ ಇಂದಿನ ಪೀಳಿಗೆಗೆ ಆಚರಣೆಗಳು ಸ್ಥಿತ್ಯಂತರಗೊಡದ್ದರ ರೂಪ ಇಲ್ಲಿ ಕಾಣಬಹುದು ಅಂದಿನ ಆಟಿಕುಲ್ಲುನಿ ಹಾಗೂ ಇಂದಿನ ಆಟಿ ಕುಲ್ಲುನಿ ಆಚರಣೆಯ ವ್ಯತ್ಯಾಸವನ್ನು ಇಲ್ಲಿ ಗಮನಿಸಬಹುದು. ಈ ನಿಟ್ಟಿನಲ್ಲಿ 'ಆಟಿಕುಲ್ಲುನಿ' ಒಂದು ಬರೀ ನಾಮ ಮಾತ್ರ ಆದರೆ ಕೂಲಂಕುಷವಾಗಿ ಅರ್ಥೈಸಿಕೊಂಡಾಗ ಇಂದಿನ ಜೀವನ ಸ್ಥಿತಿಗತಿ, ಆರ್ಥಿಕ ಪರಿಸ್ಥಿತಿಯನ್ನು ಕಂಡಾಗ ಆಚರಣೆಗಳನ್ನು ಮುಂದುವರಿಸುವಲ್ಲಿ ಅವಕಾಶ ವಂಚಿತರಾಗಿದ್ದೇವೆ ಎನ್ನುವುದು ಕಂಡುಬರುತ್ತದೆ.

**ಆಟಿ ಅಮಾವಾಸ್ಯೆಯ ಮದ್ದು**

ಆಟಿ ತಿಂಗಳಲ್ಲಿ ಮದ್ದು ಕುಡಿಯುವ ಅಚರಣೆ ಇದ್ದು ಹಾಲೆ ಮರದ ತೊಗಟೆಯನ್ನು ತೆಗೆದು ಕಷಾಯ ಮಾಡುತ್ತಾರೆ. ಆದರೆ ಕಾಯೆರ್ ಮರದ ತೊಗಟೆಯನ್ನು ತೆಗೆದು ಹಲವೆಡೆ ತೊಂದರೆ ಅನಾಹುತಗಳಾಗಿವೆ.

ಇತ್ತೀಚಿನ ದಿನಗಳಲ್ಲಿ ಈ ಸಂಸ್ಕೃತಿ ಸಂಪ್ರದಾಯವನ್ನು ಉಳಿಸುವ ಹಿನ್ನೆಲೆಯಲ್ಲಿ ಆಟಿಡೊಂಜಿ ಕೂಟ ಎಂಬಂತಹ ಕಾರ್ಯಕ್ರಮಗಳು ಅಲ್ಲಲ್ಲಿ ಕಾಣಸಿಗುತ್ತದೆ. ಹಲವು ಬಗೆಯ ತಿಂಡಿ ತಿನಿಸುಗಳ ಈ ಆಟಿಡೊಂಜಿ ಕೂಟ ಕಾರ್ಯಕ್ರಮದಲ್ಲಿ ಕಾಣಸಿಗುತ್ತದೆ. ಹಳೆಯ ಸಂಸ್ಕೃತಿಯನ್ನು ಉಳಿಸಬೇಕು ಎನ್ನುವ ಹಿನ್ನೆಲೆಯಲ್ಲಿ ಈ ಕಾರ್ಯಕ್ರಮಗಳು ಜರಗುತ್ತವೆ. ಆದರೆ ವಿಪರ್ಯಾಸವೆಂದರೆ ಆಟಿಯ ಕಷ್ಟದ ದಿನವನ್ನು ಇಲ್ಲಿ ವಿಜೃಂಭಣೆಯಾಗಿ ತೋರ್ಪಡಿಸುವುದು ಪ್ರಶ್ನಾರ್ಥಕವಾಗಿದೆ.

ಇಂದು ಈ ಕಷಾಯದ ಮಹತ್ವ ಬಹಳಷ್ಟು ಮಂದಿಗೆ ತಿಳಿದಿಲ್ಲ. ಹಿಂದಿನ ಕಾಲದಲ್ಲಿ ಆಟಿ ಅಮಾವಸ್ಯೆಯ ದಿನ ಕಟ್ಟುನಿಟ್ಟಾಗಿ ಹಾಲೆರಸ ಕುಡಿಯುವ ಪದ್ಧತಿಯಿತ್ತು. ಆದರೆ ಈಗ ಅದರ ಪದ್ಧತಿಯನ್ನು ಯಾರೂ ಆಚರಿಸುವುದಿಲ್ಲ. ತಮ್ಮ ಕೈಗೆ ಎಟಕುವಂತೆ ಇದ್ದರೆ ಕಷಾಯ ಸಿಕ್ಕಿದರೆ ಮಾತ್ರ ಕುಡಿಯುವುದು ಇಲ್ಲದಿದ್ದಲ್ಲಿ ಇಲ್ಲ. ವೈದ್ಯಕೀಯ ಕ್ಷೇತ್ರದಲ್ಲಿ ಸಾಕಷ್ಟು ಬೆಳವಣಿಗೆ ಆಗಿರುವುದರಿಂದ ಈ ಹಿಂದಿನ ಕಾಲದ ಕಷಾಯದ ಮಹತ್ವವನ್ನು ತಿಳಿಯುವಲ್ಲಿ ಆಸಕ್ತಿಯಿಲ್ಲ ಎನ್ನುವುದು ನಿಜವಾದ ಸಂಗತಿ. ಅಷ್ಟೆ ಅಲ್ಲದೇ ಹಾಲೆರಸದ ಮರದ ಬದಲು ಯಾವುದೋ ವಿಷದ ಮರದ ರಸವನ್ನು ಕುಡಿದು ಕೆಲವರು ಸಾವನ್ನಪ್ಪಿರುವ ಹಿನ್ನೆಲೆಯಿರುವುದರಿಂದ ಕೆಲವರು ಭಯದಿಂದಲೇ ಹಾಲೆರಸ ಕಷಾಯ ಕುಡಿಯುವುದಿಲ್ಲ. ಹಿರಿಯರಿದ್ದ ಮನೆಯಲ್ಲಿ ಮಾತ್ರ ಅದು ಕಟ್ಟುನಿಟ್ಟಾಗಿ ನಡೆಯುತ್ತದೆ. ವೈದ್ಯಕೀಯ ಕ್ಷೇತ್ರ ಎಷ್ಟೇ ಮುಂದುವರಿದರೂ ಪ್ರಾಕೃತಿಕವಾಗಿ ಸಿಗುವ ಗಿಡಮೂಲಿಕೆಗಳ ಕಷಾಯದ ಮಹತ್ವ ಎಂದಿಗೂ ಕುಂದುವುದಿಲ್ಲ ಎನ್ನುವುದನ್ನು ಅರಿತುಕೊಂಡರೆ ಮಾತ್ರ ಆಚರಣೆಗಳ ಉಳಿಯುವಿಕೆ ಸಾಧ್ಯ.

## ಉ. ಆಟಿಯ ಆಹಾರ ಪದ್ಧತಿಯಲ್ಲಿ ಸ್ಥಿತ್ಯಂತರ :-

ನಮ್ಮ ಜೀವನದಲ್ಲಿ ಬಹಳ ಮುಖ್ಯ ನಮ್ಮ ದೈನಂದಿನ ಆಹಾರ ಪದ್ಧತಿ. ಆಟಿಯ ಸಮಯದಲ್ಲಿ ಇದ್ದ ಆಹಾರ ಪದ್ಧತಿ ಆಟಿಯ ಸಮಯದಲ್ಲಿ ಇದ್ದ ಆಹಾರ ಪದ್ಧತಿ ಇಂದು ಕಾರ್ಯಕ್ರಮಗಳಲ್ಲಿ ಹಾಗೂ ಹೋಟೆಲ್‌ಗಳಲ್ಲಿ ಫ್ಯಾಶನ್‌ಗಳಾಗಿವೆ. ಹೋಟೆಲ್‌ಗಳಲ್ಲಿ ಆಟಿಯ ಸಮಯದಲ್ಲಿ **"ಆಟಿ ಆಫರ್"** ಎಂದೇ ಫಲಕಗಳನ್ನು ಹಾಕಿರುತ್ತಾರೆ. ನಮ್ಮ ತುಳುನಾಡಿನ ವಿಶಿಷ್ಟ ತಿಂಡಿಗಳು ನಾಡಿನ ಹಿರಿಮೆಗೆ ಕಾರಣವಾದ ಮತ್ತೊಂದು ಮುಖ್ಯ ಅಂಶ. ಆಗಿನ ಕಾಲದಲ್ಲಿ ಆಟಿಯ ಸಮಯದಲ್ಲಿ ಕಡುಕಷ್ಟದ ಕಾಲವಾದ್ದರಿಂದ ಪ್ರಕೃತಿಯಲ್ಲಿ ದೊರೆಯುವ ಸೊಪ್ಪು ಗೆಡ್ಡೆ ಗೆಣಸು ಹಣ್ಣುಗಳನ್ನು ಹಣ್ಣುಗಳನ್ನು ಜನ ತಿಂದು ಬದುಕುತ್ತಿದ್ದರು. ಆದರೆ ಇಂದು ಆಹಾರ ಪದ್ಧತಿಯಲ್ಲಿ ಬಹುದೊಡ್ಡ ಸ್ಥಿತ್ಯಂತರವನ್ನು ಕಾಣಬಹುದಾಗಿದೆ. ಆಧುನಿಕ ಬದುಕು ಯಾಂತ್ರಿಕ ಬದುಕು ಜನರಿಗೆ ಅಡುಗೆ ಮಾಡಲು ಸಮಯವಿಲ್ಲ. ಅಲ್ಲಲ್ಲಿ ಬೀದಿಯಲ್ಲಿ ಫಾಸ್ಟ್‌ಫುಡ್‌ಗಳ ಅಂಗಡಿ ಇರುವೆಯಂತೆ ಸಾಲಾಗಿ ಇವೆ. ಇಂದಿನ ಪೀಳಿಗೆ ಈ ಫಾಸ್ಟ್‌ಫುಡ್‌ಗಳ ರುಚಿಗೆ ಸೋತು ಎಲ್ಲೋ ನಮ್ಮ ವಿಶಿಷ್ಟ ತಿಂಡಿಗಳನ್ನು ಮರೆತು ಹೋಗಿದ್ದಾರೆ. ಮಕ್ಕಳಂತೂ ಮಧ್ಯಾಹ್ನದ ಊಟ ಬಿಟ್ಟು ಬ್ರೆಡ್, ಪಿಜ್ಜಾ, ಬರ್ಗರ್‌ಗಳಂತಹ ವಿದೇಶಿ ಆಹಾರಕ್ಕೆ ಹೊಂದಿಕೊಂಡಿದ್ದಾರೆ. ಮಕ್ಕಳಲ್ಲಿ ಪತ್ರೊಡೆ, ಹಲಸಿನ ಹಣ್ಣಿನ ಗಟ್ಟಿ ಎಂದು ಹೇಳಿದರೆ ಮುಖವನ್ನೇ ಊದಿಸಿಕೊಳ್ಳುತ್ತಾರೆ. ಕೆಲವರು ಹಾಗೆಂದರೇನು? ಎಂದು ಕೇಳಿದರೂ ಸೋಜಿಗವಿಲ್ಲ. ಮಳೆಗಾಲದಲ್ಲಿ ಕೆಲವೊಂದು ಮನೆಗಳಲ್ಲಿ ಆಟಿಯ ಸಮಯದಲ್ಲಿ ಮಾಡುವ ತಿಂಡಿಗಳನ್ನು ಮಾಡಿದರೂ ಫಾಸ್ಟ್‌ಫುಡ್ ಮತ್ತು ಬ್ರೆಡ್ ತಿಂದು ಸತ್ತು ಹೋದ ನಾಲಗೆಗೆ ಯಾವ ರುಚಿಯೂ ನಾಟುವುದಿಲ್ಲ. ಅದರಲ್ಲೂ ಆಗಿನ ಕಾಲದಲ್ಲಿ ವಿಶಿಷ್ಟವಾಗಿ ಆಟಿಯ ಸಮಯದಲ್ಲಿ ಬೆಳೆಯುತ್ತಿದ್ದ ಸೊಪ್ಪುಗಳು ಕಣ್ಮರೆಯಾಗಿ ಈ ನಿಟ್ಟಿನಲ್ಲಿ ಆಧುನೀಕರಣಕ್ಕೆ ನಮ್ಮ ಬದುಕು ಸೋತು ನಾಡಿನ ವಿಶಿಷ್ಟ ಆಚರಣೆಗಳನ್ನೇ ಮರೆಯುವ ದುರ್ಗತಿ ಬಂದಿರುವುದು ನಿಜಕ್ಕೂ ವಿಷಾದದ ಸಂಗತಿ ಹಿರಿಯರಿದ್ದ ಮನೆಯಲ್ಲಿ ಆಟಿಯ ವಿಶಿಷ್ಟ ತಿಂಡಿಗಳನ್ನು ಮಾಡುತ್ತಾರೆ. ಆದರೆ ಎಷ್ಟು ದಿನ ಅದು ಮುಂದುವರಿಯುತ್ತದೆ ಎನ್ನುವುದು ಕೂಡ ಇಲ್ಲಿ ಪ್ರಶ್ನೆಯಾಗಿಯೇ ಉಳಿಯುತ್ತದೆ. ಆಗಿನ ಕಾಲದಲ್ಲು ಕೂಡು ಕುಟುಂಬ ಮನೆಯ ಸದಸ್ಯರೆಲ್ಲರೂ ಒಟ್ಟಾಗಿ ಸೇರಿ ಮನೆಯಲ್ಲಿ ವಿಶಿಷ್ಟ ತಿಂಡಿಗಳನ್ನು ಮಾಡುತ್ತಿದ್ದರು. ಆದರೆ ಈಗ ಮನೆಯಲ್ಲಿ ಇಬ್ಬರು ಅಥವಾ ಮೂವರು ಇರುತ್ತಾರೆ. ತಮಗೆ ಇಡ್ಲಿ ಅಥವಾ ಪತ್ರೊಡೆ ತಿನ್ನಬೇಕೆನಿಸಿದರೂ ಅಂಗಡಿಗಳಲ್ಲಿ ರೆಡಿಮೇಡ್ ಆಗಿ ಸಿಗುತ್ತದೆ. ಆದ್ದರಿಂದ ಅದನ್ನು ಮಾಡುವ ಗೋಜಿಗೆ ಹೋಗುವುದಿಲ್ಲ. ಈ ಆಧುನೀಕರಣ ನಾಡಿನ ಉಳಿವು ಎನ್ನುವುದೇ ಅಥವಾ ಆಚರಣೆ ಸಂಪ್ರದಾಯಗಳ ಅಳಿವು ಎನ್ನುವುದೇ? ನಮ್ಮಲ್ಲಿ ಗೊಂದಲದ ಪ್ರಶ್ನೆ ಕಾಡುತ್ತದೆ. ಆಟಿಯ ತಿಂಡಿಗಳು ಶಾಲಾ ಕಾಲೇಜುಗಳಲ್ಲಿ ಆಟಿಯ ಕಾರ್ಯಕ್ರಮದಲ್ಲಿ ಪ್ರದರ್ಶನಕ್ಕಿಡುತ್ತಾರೆ. ವಿದ್ಯಾರ್ಥಿಗಳೂ ಅದನ್ನು ನೋಡುತ್ತಾರೆ ಆದರೆ ಅಷ್ಟೇ ವಸ್ತು ಸಂಗ್ರಹಾಲಯಗಳಲ್ಲಿ ನೋಡುವ ದೃಷ್ಟಿಯಲ್ಲಿ ಅದರ ವೈಶಿಷ್ಟ್ಯತೆ ಮಹತ್ವಗಳನ್ನು ಹೇಳುವವರೂ ಇಲ್ಲ, ಹೇಳಲೂ ಸಮಯವೂ ಇಲ್ಲ. ಈ ನಿಟ್ಟಿನಲ್ಲಿ ಆರೋಗ್ಯಕರ ತಿಂಡಿಗಳನ್ನು ಮರೆತು ಇಂದು ನಾವು ಈ ಸ್ಥಿತ್ಯಂತರಕ್ಕೆ ಒಳಗಾಗಿರುವುದು ಅರ್ಥಹೀನ ಎಂದು ಹೇಳಬಹುದು. ಇಲ್ಲಿ ಈ ಕಾಲದ ತಿಂಡಿಗಳನ್ನು ತಿನ್ನಬಾರದೆಂದೊ? ಅಥವಾ

ನಾವು ಹೊಸತನವನ್ನು ಹುಡುಕಬಾರದು ಎನ್ನುವುದು ಅಭಿಪ್ರಾಯವಲ್ಲ, ಕನ್ನಡಕವಿದೆ ಎಂದು ಕಣ್ಣನ್ನು ಕಿತ್ತೆಸೆಯುವ ಮೂರ್ಖತನ ಬೇಡವೆನ್ನುವುದಷ್ಟೇ ಅಭಿಪ್ರಾಯ.

ಊ. <u>ಆಟಿಯ ಕ್ರೀಡೆಗಳಲ್ಲಿನ ಸ್ಥಿತ್ಯಂತರ :-</u>

ಆಟಿಯ ಕಾಲದ ಪ್ರಮುಖ ಕ್ರೀಡೆಗಳು ಚೆನ್ನೆಮಣೆ, ತೆಂಗಿನಕಾಯಿ ಆಟ, ಹುಲಿದನ ಆಟ, ಯಾವುದೆ ಆಟಗಳು ಇಂದಿಗೆ ಕಾಣಸಿಗುವುದಿಲ್ಲ. ಚೆನ್ನೆಮಣೆ ಕಾರ್ಯಕ್ರಮದಲ್ಲಿ ಮಾತ್ರ ಅದರ ದರ್ಶನವನ್ನು ಪಡೆಯಹುದು ಇದಕ್ಕೆ ಕಾರಣ ಇಂದಿನ ಮಕ್ಕಳಿಗಿರುವ ಒತ್ತಡ. ಆಗಿನ ಕಾಲದಲ್ಲಿ ಅದರಲ್ಲೂ ಆಟಿಯ ಸಮಯದಲ್ಲಿ ಮನೆಯ ಹಿರಿಯರು ಮಕ್ಕಳಿಗೆ ಆಟಗಳನ್ನೇ ಕಲಿಸುತ್ತಿದ್ದರು. ಅದರಂತೆ ಮಕ್ಕಳು ಒಳಾಂಗಣ ಹಾಗೂ ಹೊರಾಂಗಣ ಆಟದಲ್ಲಿ ತಲ್ಲೀನರಾಗಿ ಬಿಡುತ್ತಿದ್ದರು. ರಜೆ ಸಿಕ್ಕಾಗ ಅಜ್ಜಿ ಮನೆಗೆ ಹೋಗುವುದೆಂದರೆ ಸಂತೋಷ. ಆದರೆ ಇಂದು ರಸ್ತೆಯಲ್ಲಿ ಮನೆಯ ಅಂಗಳದಲ್ಲಿ ಮಕ್ಕಳ ಓಡಾಟವಿಲ್ಲ. ಶಾಲೆಮುಗಿಸಿ ನೇರವಾಗಿ ಮಕ್ಕಳು ಟ್ಯೂಷನ್ ಸೆಂಟರ್‌ಗಳಿಗೆ ಪ್ರಯಾಣ ಬೆಳೆಸುತ್ತಾರೆ. ಅವರಿಗಿಂತ ಭಾರವಾದ ಚೀಲಗಳನ್ನು ಹೆಗಲ ಮೇಲೆ ಹಾಕಿಕೊಂಡು ಬಾಡಿದ ಮುಖದೊಂದಿಗೆ ಹೋಗುತ್ತಾರೆ. ಆಧುನಿಕ ಜಗತ್ತಿನಲ್ಲಿ ಎಲ್ಲದಕ್ಕೂ ಸ್ಪರ್ಧೆ ಈ ಕಾರಣದಿಂದಾಗಿ ಹೆತ್ತವರು ಕೂಡ ತಮ್ಮ ಮಕ್ಕಳಿಗೆ ಜಾಸ್ತಿ ಒತ್ತಡ ಹಾಕುತ್ತಾರೆ. ರಜೆ ಸಿಕ್ಕಾಗ ಅಜ್ಜಿಮನೆ ಎಂಬ ಸಂತೋಷ ಹೋಗಿ ನೃತ್ಯ, ತರಬೇತಿ, ಶಿಬಿರ, ಅಥವಾ ಇನ್ನಾವುದೇ ಶಿಬಿರಗಳಿಗೆ ಮಕ್ಕಳು ಹೋಗುತ್ತಾರೆ. ತುಳುನಾಡಿನ ಪರಂಪರೆಯ ಕ್ರೀಡೆಗಳ ಅರಿವು ಈ ದಿನ ಮಕ್ಕಳಿಗಿಲ್ಲ. ಚೆನ್ನೆಮಣೆ ಎಂದರೇನು ? ಎಂದು ಮಕ್ಕಳು ಕೇಳುವಾಗ ಅದರ ಮಹತ್ವ ಅಡದ ಕ್ರಮ ಹೇಳಿಕೊಡಲು ಮನೆಯಲ್ಲೂ ಯಾರಿರುವುದಿಲ್ಲ. ಆಗಿನ ಜೀವನಕ್ರಮಕ್ಕೂ ಇಂದಿನ ಕ್ರಮಕ್ಕೂ ವ್ಯತ್ಯಾಸವಿದೆಯಾದರೂ ಕೆಲವೊಂದು ಸಂತೋಷದ ಕ್ಷಣಗಳು, ಉತ್ಸಾಹ ಸ್ಥಿತ್ಯಂತರಗೊಂಡು ಕಣ್ಮರೆಯಾಗುತ್ತಿದೆ ಎನ್ನುವುದು ಮಾತ್ರ ಸಾಧ್ಯ.

ಋ. <u>ಭೌಗೋಳಿಕ ಪರಿಸರದಲ್ಲಿ ಸ್ಥಿತ್ಯಂತರ :-</u>

ಇದು ಭೌಗೋಳಿಕ ಕೃಷಿ ಭೂಮಿ ಕಾಣೆಯಾಗುತ್ತಿರುವ ಕಾಲ. ಹಿಂದೆ ಆಟಿಯ ತಿಂಗಳನಲ್ಲಿ ಕಳ್ಳ ಕಾಪು ಕುತ್ತುವ ಕ್ರಮಗಳಿದ್ದವು. ಕೃಷಿಯು ಆರ್ಥಿಕತೆಯ ಸ್ಥಾನವನ್ನು ಕಳೆದುಕೊಳ್ಳುತ್ತ ಕೃಷಿಯಿಂದಲೇ ಹುಟ್ಟಿಕೊಂಡ ಹಲವು ಆಚರಣೆಗಳಿಗೆ ಕಡಿವಾಣ ಬಿದ್ದಂತಾಗಿದೆ.

ಅನಿಷ್ಟದ ಕಾಲವೆಂಬಂತೆ ಪರಿಣಮಿಸುತ್ತಿದ್ದ ಆಟಿಯಲ್ಲಿ ಉಣ್ಣುವುದಕ್ಕೆ ತಿನ್ನುವುದಕ್ಕೆ ಬಹಳ ತೊಂದರೆಯಾಗುತ್ತಿತ್ತು. ಕೃಷಿಯನ್ನೇ ಅರಸುತ್ತಿದ್ದ ಕೂಡುಕುಟುಂಬದ ಜನರಿಗೆ ಹವಾಮಾನದ ಏರುಪೇರಿನಿಂದಾಗಿ ಆರ್ಥಿಕವಾಗಿ ಹಿನ್ನೆಡೆಯಾಗಿತ್ತಿತ್ತು. ಆದರೆ ಇಂದು ಅತ್ತ ಕೂಡುಕುಟುಂಬವಿಲ್ಲ ಇತ್ತ ಕೃಷಿಯೂ ಇಲ್ಲ. ಆಟಿಯ ಕಷ್ಟ ನಷ್ಟ ತಿಂಡಿ ತಿನಿಸುಗಳ ಬಗ್ಗೆ ಬಹುಮಟ್ಟಿಗೆ ಯಾರಿಗೂ ತಿಳಿದಿಲ್ಲ.

ಆಟಿಯ ಕಾಲದ ಮಳೆಯ ಕುರಿತು ನಮಗೆಲ್ಲರಿಗೂ ತಿಳಿದೇ ಇದೆ. ವಿಪರೀತ ಮಳೆಯಿಂದಾಗಿ ಜನ ಮನೆಯಲ್ಲೇ ಇರುತ್ತಿದ್ದರು. ಆದರೆ ಇಂದು ಮಳೆಯನ್ನು ನೋಡಲು ಮಳೆ ಸುರಿಯಲು ಕಾದುಕುಳಿತುಕೊಳ್ಳಬೇಕಾದ ಪರಿಸ್ಥಿತಿ ಬಂದಿದೆ. ಇದಕ್ಕೆ ಮುಖ್ಯ ಕಾರಣ ಮನುಷ್ಯನ ಸ್ವಾರ್ಥ, ಅರಣ್ಯಗಳ ನಾಶ. ಮನುಷ್ಯ ಅಧುನೀಕರಣ, ಜಾಗತೀಕರಣ ಎಂದು ಪರಿಸರದ ನಾಶದಲ್ಲಿ ತನ್ನನ್ನು ತಾನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾನೆ. ಕಟ್ಟಡಗಳು ಹೆಚ್ಚುತ್ತಿವೆ, ಮರಗಳನ್ನೆಲ್ಲಾ ಕಡಿದು ರಸ್ತೆ ಅಗಲ ಮಾಡುತ್ತಿದ್ದಾರೆ. ರಸ್ತೆಗಳಲ್ಲಿ ಕಾಲಿಡಲು ಸಾಧ್ಯವೇ ಆಗದಷ್ಟು ವಾಹನಗಳ ಹಿಂಡು, ಜನರಿಗೆ ನಡೆಯಲು ಫುಟ್‌ಪಾತ್‌ಗಳೇ ಇಲ್ಲದೆ ಅಲ್ಲಲ್ಲಿ ವಾಹನಗಳು ತುಂಬಿಹೋಗಿದೆ. ಮಂಗಳೂರಿನ ವೆಲೆನ್ಸೀಯಾ ಪ್ರದೇಶದಲ್ಲಿ ಸಾಲು ಸಾಲಾದ ಮರಗಳು ನೂರಾರು ಪಕ್ಷಿಗಳಿಗೆ ಆಶ್ರಯ, ಜನರಿಗೆ ನೆರಳು ನೀಡುತ್ತಿದ್ದವು. ಆದರೆ ೨೦೧೩ನೇ ವರ್ಷದಲ್ಲಿ ಇಲ್ಲಿದ್ದ ಎಲ್ಲ ಮರಗಳನ್ನು ಕಡಿದು ಹಾಕಲಾಯಿತು. ಇದರ ಕುರಿತು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವೆಲೆನ್ಸೀಯಾ ನಗರದ ಆಟೋ ರಿಕ್ಷಾ ಚಾಲಕರಲ್ಲಿ ಕೇಳಿದಾಗ ಎಲ್ಲರೂ ರಸ್ತೆ ಅಗಲ ಬೇಕು ಎಂದರು. ಕೆಲವರು ಮರಕಡಿದು ಪರಿಸರ ನಾಶ ಮಾಡಿ ಅದರಿಂದ ನಮಗೆ ಕಷ್ಟ ತೊಂದರೆಗಳು ಉಂಟಾಗುತ್ತದೆ ಎಂದು ವಿಷಾದ ವ್ಯಕ್ತಪಡಿಸಿದರು. ಅರಣ್ಯಗಳಿಲ್ಲದಿದ್ದರೆ ಮಳೆ ಸುರಿಯಲು ಸಾಧ್ಯವಿಲ್ಲ. ಪಕ್ಷಿಗಳ ಪ್ರಾಣಿಗಳ ಸಂಖ್ಯೆ ಕಡಿಮೆಯಾಗಿದೆ ಹಿಂದಿನ ಕಾಲದಲ್ಲಿ ಕಾಣಸಿಗುವ ಪ್ರಾಣಿ ಪಕ್ಷಿ ಸಂತತಿಯೇ ಅಳಿದು ಹೋಗಿದೆ. ನೀರಿನ ಸಮಸ್ಯೆ, ಶುದ್ಧಗಾಳಿಯ ಸಮಸ್ಯೆ ಎದುರಾದರೂ ಹೊಸಪೀಳಿಗೆ ಹೊಸತು ಎನ್ನುವ ನೆಪದಲ್ಲಿ ಎಲ್ಲವನ್ನೂ ಕಳೆದುಕೊಳ್ಳುತ್ತಿದೆ ಎನ್ನುವುದು ಮಾತ್ರ ಜೀರ್ಣಿಸಲಾಗದ ಸತ್ಯ.

ಆಟಿಯ ಮಳೆಯ ಅಬ್ಬರ ಭಯಂಕರವಿರುತ್ತದೆ ಆದರೆ ಇಂದು ಕಾಲಕಾಲಕ್ಕೆ ಮಳೆಯಿಲ್ಲ. "ದೆಹಲಿಯಲ್ಲಿ ಗಂಟೆಗೆ ರೂ. ೩೦೦೦ ಕೊಟ್ಟು ಜನರು ಶುದ್ಧಗಾಳಿ ಸೇವಿಸುತ್ತಾರೆ" ಎಂದು ಮಂಗಳೂರಿನ ಪರಿಸರವಾದಿ ಶ್ರೀ ದಿನೇಶ್ ಹೊಳ್ಳ ಒಂದು ಭಾಷಣದಲ್ಲಿ ಹೇಳಿರುವುದನ್ನು ಇಲ್ಲಿ ನೆನಪಿಸಬಹುದು.

ಭೌಗೋಳಿಕ ಸ್ಥಿತ್ಯಂತರ ಮುಂದಿನ ಪೀಳಿಗೆ ಆಮ್ಲಜನಕಕ್ಕೂ ಬಹಳಷ್ಟು ಹಣ ಕೊಟ್ಟು ಖರೀದಿ ಮಾಡಬೇಕೆನ್ನುವಷ್ಟರ ಮಟ್ಟಿಗೆ ತಲುಪತ್ತದೋ ಎಂಬ ನಂಬಿಕೆಯನ್ನು ಉಂಟು ಮಾಡುವುದು ಅನಿವಾರ್ಯ. ಆಟಿಯ ಕಾಲದಲ್ಲಿ ಅಂದು ಜನರ ಜೀವನ ಬಹಳ ಕಷ್ಟಕರವಾಗಿತ್ತು. ಆಟಿಯ ಮಳೆಗೆ ಜನರು ಮನೆಯಿಂದ ಅಂಗಳಕ್ಕೆ ಕಾಲಿಡುತ್ತಿರಲಿಲ್ಲ. ಓಡಾಟ ಕಷ್ಟವಾಗಿತ್ತು ಆದರೆ ಇಂದು ಮಳೆಗಾಲದಲ್ಲಿ ಮೈ ಉರಿದು ಹೋಗುವಷ್ಟು ಕೆಂಡದಂತಹ ಬಿಸಿಲನ್ನು ಕಾಣಬಹುದು. ಮಳೆಯಿಲ್ಲದ ಕಾರಣ ಭಾರತದ ಬೆನ್ನೆಲುಬಾಗಿರುವ ವ್ಯವಸಾಯ ಕಷ್ಟವಾಗಿ ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಸಂಗ ಅಲ್ಲಲ್ಲಿ ಕೇಳಿ ಬರುತ್ತದೆ. ಆಗಿನ ಕಾಲದ ಬದುಕು ಹಾಗೂ ಇಂದಿನ ಬದುಕಿಗೆ ಅಜಗಜಾಂತರ ವ್ಯತ್ಯಾಸವಿದೆ. ಇಂದು ಕಾಲಕಾಲಕ್ಕೆ ಯಾವುದೂ ಸರಿಯಾಗಿ ಆಗುತ್ತಾ ಇಲ್ಲ. ಭೌಗೋಳಿಕ, ಪ್ರಾಕೃತಿಕ ಪರಿಸರದ ಈ ಸ್ಥಿತ್ಯಂತರ ಎಲ್ಲರಲ್ಲೂ ಆತಂಕವನ್ನುಂಟು ಮಾಡುತ್ತದೆ.

**ಆಟಿಡ್ ಒಂಜಿ ದಿನ :**

ಇಂದು ಆಟಿಯ ಕುರಿತು ಹಲವಾರು ಕಾರ್ಯಕ್ರಮಗಳನ್ನು ಸಂಘಸಂಸ್ಥೆಗಳು ಹಮ್ಮಿಕೊಳ್ಳುತ್ತವೆ. ಈ ಕುರಿತು ಕ್ಷೇತ್ರ ಕಾರ್ಯದ ಸಮಯದಲ್ಲಿ ವಿಜಯಲಕ್ಷ್ಮಿ ಬಿ ಶೆಟ್ಟಿ (ಮಂಗಳೂರು ತಾಲೂಕು ಮಹಿಳಾ ಮಂಡಲಗಳ ಒಕ್ಕೂಟದ ಗೌರವಾಧ್ಯಕ್ಷೆ) ಅವರನ್ನು ಕೇಳಿದಾಗ "ಮಂಗಳೂರಿನಲ್ಲಿ ಒಂದು ವರ್ಷಕ್ಕೆ ೧೦೦ ಆಟಿಯ ಕುರಿತ ಕಾರ್ಯಕ್ರಮಗಳನ್ನು ಬೇರೆ ಬೇರೆ ಸಂಘ ಸಂಸ್ಥೆಗಳೂ ತಮ್ಮ ತಮ್ಮ ಊರಿನಲ್ಲಿ ಮಾಡುತ್ತಾರೆ. ಆಟಿಯ ತಿಂಗಳು ವಿಶಿಷ್ಟ ಆಚರಣೆಗಳಿಂದ ತುಂಬಿದ ತಿಂಗಳು ಆದ ಕಾರಣ ಮುಂದಿನ ಸಂತತಿ ಅದನ್ನು ಮರೆಯಬಾರದು ಎನ್ನುವ ಉದ್ದೇಶದಿಂದ ಆಟಿಯ ಕುರಿತ ಕಾರ್ಯಕ್ರಮಗಳು ನೆರವೇರುತ್ತದೆ ಎಂದರು".

ಕರಾವಳಿ ಜಿಲ್ಲೆಗಳ ಉದ್ದಗಲಕ್ಕೂ ಮಳೆಗಾಲದಲ್ಲಿ ಮನೆಯೊಳಗೆ ಆಹಾರ ಧಾನ್ಯ ಪದಾರ್ಥಗಳ ಸಂಗ್ರಹ ಬರಿದಾಗಿರುವ ಆಟಿ (ಆಷಾಢ) ತಿಂಗಳಲ್ಲಿ ಜನರೆಲ್ಲರೂ ಆಹಾರಕ್ಕಾಗಿ ವಿಷಮ ಪರಿಸ್ಥಿತಿಯನ್ನು ಎದುರಿಸುತ್ತಿರುವುದು ಒಂದು ಪರಂಪರೆಯಾಗಿದೆ. ಇಂತಹ ದಿನಗಳಲ್ಲಿ ಹೊರಗಿನ ಹಿತ್ತಿಲು, ತೋಟ, ಬಯಲು, ಗುಡ್ಡಪ್ರದೇಶಗಳಲ್ಲಿ ಬೆಳೆಯುತ್ತಿರುವ ಸಸ್ಯಜನ್ಯ ಆಹಾರ ಪದಾರ್ಥಗಳನ್ನು ಬಳಸಿಕೊಳ್ಳುವುದು ಅನಿವಾರ್ಯವೂ ಹೌದು. ವಾಸ್ತವವಾಗಿ ನೋಡಿದರೆ ಮಳೆಗಾಲದಲ್ಲಿ ಹೊರಪರಿಸರದಲ್ಲಿ ವಿಪುಲ ಸಂಖ್ಯೆಯಲ್ಲಿ ವಿವಿಧ ಬಗೆಯ ಸಸ್ಯ ಚಿಗುರು, ಗೆಡ್ಡೆಗೆಣಸು, ತರಕಾರಿ ಫಲವಸ್ತುಗಳು ದೊರೆಯುತ್ತವೆ. ಒಂದು ಅರ್ಥದಲ್ಲಿ ಈ ಸಸ್ಯಪರಿಸರದಿಂದ ಎರಡು ಉದ್ದೇಶಗಳು ಈಡೇರುತ್ತವೆ. ಮೊದಲನೇಯದಾಗಿ ಆಹಾರ ಪದಾರ್ಥಗಳಾಗಿ ಅವುಗಳ ಬಳಕೆ, ಎರಡನೇಯದಾಗಿ ಮಳೆಗಾಲದ ಕೆಲವು ದಿನಗಳಲ್ಲಿ ಅಗತ್ಯವಾಗಿ ಬಳಸಿಕೊಳ್ಳಬೇಕಾದ ಆಚರಣೆಗಳನ್ನು ರೂಢಿಸಿಕೊಂಡು ಬಂದಿರುತ್ತಾರೆ. ಅಂತಹವುಗಳಲ್ಲಿ ಆಟಿಯ ಅಮಾವಾಸ್ಯೆಯ ದಿನ ಹಾಳೆ ಮರದ ತೊಗಟೆಯ ರಸವನ್ನು ಬೆಳ್ಳಂಬೆಳಗ್ಗೆ ಬರೀ ಹೊಟ್ಟೆಗೆ ಸೇವಿಸುವ ಆಚರಣೆ, ಇದರ ಜೊತೆಗೆ ರೋಗ ನಿರೋಧಕವಾಗಬಲ್ಲ ಈ ತರದ ಅನೇಕ ಸಸ್ಯಗಳನ್ನು ಆಹಾರ ಪದಾರ್ಥವಾಗಿ ಆಟಿ ತಿಂಗಳ ದಿನಗಳಲ್ಲಿ ಸೇವಿಸುವುದು ರೂಢಿಯಾಗಿದೆ. ಇಂತಹ ಆಹಾರ ಮತ್ತು ಔಷಧೀಯ ಗುಣವುಳ್ಳ ಸಸ್ಯಪರಿಸರದ ಪರಿಚಯ ಅಧುನಿಕ ಪೀಳಿಗೆಗೆ ಇಲ್ಲವಾಗಿದೆ. ಈ ನೆಲೆಯಲ್ಲಿ ಪಿಲಿಕುಳ ನಿಸರ್ಗಧಾಮದ ಸಂಸ್ಕೃತಿ ಗ್ರಾಮದ ಗುತ್ತಿಗೆ ಮನೆ ಚಾವಡಿಯಲ್ಲಿ ಕರ್ನಾಟಕ ತುಳು ಸಾಹಿತ್ಯ ಆಕಾಡೆಮಿ, ಮಂಗಳೂರು ತಾಲೂಕು ಮಹಿಳಾ ಮಂಡಲಗಳ ಒಕ್ಕೂಟದ ಸಹಯೋಗದಲ್ಲಿ ಆಟಿಡೊಂಜಿ ದಿನ, ಆಷಾಢದಲ್ಲಿ ಒಂದು ದಿನ, ಆಹಾರ ಏರ್ಪಡಿಸುವ ಸಸ್ಯ ಪರಿಸರ ಮತ್ತು ಆಟಿತಿಂಗಳ ಅಡುಗೆ ಸಡಗರ ಹಾಗೂ ಜಾನಪದ ಸಿರಿ ವೈಭವ ಕಾರ್ಯಕ್ರಮವನ್ನು ಏರ್ಪಡಿಸುವ ಉದ್ದೇಶವಿರಿಸಿಕೊಂಡಿದೆ.

ಆಗಸ್ಟ್ ೧೨ ೨೦೧೫ರಲ್ಲಿ ಮಂಗಳೂರಿನ ಉರ್ವಸ್ಟೋರ್‌ನ ತುಳುಭವನದಲ್ಲಿ ನಡೆದ ಆಟಿ ಆಚರಣೆಯ ಕಾರ್ಯಕ್ರಮದಲ್ಲಿ ಶ್ರೀಮತಿ ಜಾನಕಿ ಬ್ರಹ್ಮಾವರ್‌ರವರು ಹಾಗೂ ರಾಜಲಕ್ಷ್ಮೀ ಕೊಡಿಬೆಟ್ಟು ಈ ರೀತಿಯಾಗಿ ಹೇಳಿದರು. ಆಟಿ ಆಚರಣೆ ನಿರಂತರ ನಡೆಯಲಿ, ತುಳು ಸಾಹಿತ್ಯವನ್ನು ಎಲ್ಲರೂ ಓದಬೇಕು. ಇದರ ಜತೆ ಆಯುರ್ವೇದವೂ ಜನಪ್ರಿಯವಾಗಬೇಕು ಎಂದು ಶ್ರೀಮತಿ ಜಾನಕಿ ಬ್ರಹ್ಮಾವರ್‌ರವರು ಹೇಳಿದರು. ಪತ್ರಕರ್ತೆ ರಾಜಲಕ್ಷ್ಮಿ ಕೋಡಿಬೆಟ್ಟು ಮಾತನಾಡಿ, ಶಾಲೆಗಳ ಪ್ರತಿಭಾಕಾರಂಜಿಯಲ್ಲೂ ನಮ್ಮ ಹಳೆಯ ಆಟಗಳಾದ ಚೆನ್ನೆಮಣೆ,

ಲಗೋರಿ ಸ್ಪರ್ಧೆಯಾಗಬೇಕು. ಈ ಮುಖೇನ ನಮ್ಮ ಹಿಂದಿನ ಆಟಗಳನ್ನು ಉಳಿಸಿಕೊಳ್ಳುವಂಥ ಕೆಲಸವಾಗಬೇಕು. ಆಗ ಮಾತ್ರ ಪರಂಪರೆ ಬೆಳೆಯಲು ಸಾಧ್ಯ ಎಂದರು.



ಶಾಲಾ ಕಾಲೇಜುಗಳಲ್ಲಿರುವ ತುಳು ಸಂಘದ ವತಿಯಿಂದ ಕೂಡ ಆಟಿಯ ಕುರಿತ ಕಾರ್ಯಕ್ರಮಗಳು ನಡೆಯುತ್ತವೆ. ಈ ಕಾರ್ಯಕ್ರಮದಲ್ಲಿ ಹೆಂಗಸರೆಲ್ಲರೂ ಒಟ್ಟಾಗಿ ಯಾವುದೆ ಜಾತಿ ಭೇದವಿಲ್ಲದೆ ಆಟಿಯ ವಿಶಿಷ್ಟ ಬಗೆಯ ಚಟ್ನಿ, ಸೊಪ್ಪಿನ ಪಲ್ಯ ತಿಂಡಿಗಳನ್ನು ಮಾಡಿ ತರುವುದು ನಿಜಕ್ಕೂ ಪ್ರಶಂಸನೀಯ. ಆಟಿಯ ಕಾರ್ಯಕ್ರಮಗಳು ಬೇರೆ ಬೇರೆ ಹೆಸರಿನಿಂದ ನಡೆಯುತ್ತದೆ. ಕಾರ್ಯಕ್ರಮದ ಹೆಸರು ಬೇರೆ ಇದ್ದರೂ ಕೂಡ ಆ ಕಾರ್ಯಕ್ರಮ ಮಾತ್ರ ಆಟಿ ಆಚರಣೆಗೆ ಸಂಬಂಧಪಟ್ಟದ್ದಾಗಿರುತ್ತದೆ. ಆಟಿದ ಕೂಟ, ಕೆಸರ್‌ಡ್ ಒಂಜಿದಿನ, ಆಟಿದ ತಿರ್ಲ್ ಇತ್ಯಾದಿ. ಇಂದಿನ ಫ್ಯಾಶನ್ ಯುಗದಲ್ಲಿ ಆಚರಣೆಗಳು ಸಂಪ್ರದಾಯಗಳು ಮಾಯಾವಾಗುತ್ತಿರುವ ಸಂದರ್ಭದಲ್ಲಿ ಆಟಿಯ ಕುರಿತ ಕಾರ್ಯಕ್ರಮಗಳು ನಮ್ಮ ಹಿಂದಿನ ಕಾಲದ ಸಂಸ್ಕೃತಿ ಆಚಾರ ವಿಚಾರಗಳ ಸವಿನೆನಪನ್ನು ಮರುಕಳಿಸುತ್ತದೆ. ಆಟಿಯ ಕುರಿತ ಇಂತಹ ಕಾರ್ಯಕ್ರಮಗಳಿಂದಾಗಿ ಮಾತ್ರ ತುಳುನಾಡಿನಲ್ಲಿ ಅದೂ ಆಟಿ ತಿಂಗಳಿನಲ್ಲಿ ಇಷ್ಟೊಂದು ತಿಂಡಿ ತಿನಿಸುಗಳಿವೆ ಎನ್ನುವುದು ಗೊತ್ತಾಗುತ್ತದೆ.

ಆಟಿಯ ಕಾರ್ಯಕ್ರಮಗಳು ಬರೀ ಫ್ಯಾಶನ್ ಎಂದು ಕೆಲವರ ಅಭಿಪ್ರಾಯವಿದೆ ಆದರೆ ಎಲ್ಲವೂ ಆಧುನಿಕ ಬದುಕಿನಲ್ಲಿ ಸ್ಥಿತ್ಯಂತರಗೊಂಡಿದೆ ಆ ಕಾಲಕ್ಕೂ ಈ ಕಾಲಕ್ಕೂ ಹೋಲಿಕೆ ಮಾಡುವುದು ವ್ಯರ್ಥ ಯಾಕೆಂದರೆ ಸ್ಥಿತ್ಯಂತರ ಎಲ್ಲ ಆಚರಣೆಗಳಲ್ಲಿವೆ ಆದ ಕಾರಣ ಇಂತಹ ಆಟಿಯ ಕುರಿತ ಕಾರ್ಯಕ್ರಮಗಳಿಂದಾಗಿ ವಿದ್ಯಾರ್ಥಿಗಳಿಗೆ ಸಂಸ್ಕೃತಿ ವೈಶಿಷ್ಟ್ಯತೆ ಅಂತರ್ಗತಗೊಳ್ಳುತ್ತದೆ ಎಂದರೆ ಅದು ಸುಳ್ಳಾಗದು. ಆದರೆ ಕೆಲವೊಂದು ಆಟಿಯ ಕಾರ್ಯಕ್ರಮಗಳಿಗೆ NSS ವಿದ್ಯಾರ್ಥಿಗಳು ಹೋದಾಗ ಅಲ್ಲಿ ದುಬಾರಿ ಟಿಕೆಟ್‌ಗಳನ್ನು ಮಾಡಿ ಅದರಿಂದ ಕಾರ್ಯಕ್ರಮ ಮಾಡುವುದು ಎಲ್ಲೋ ಒಂದು ತರಹದ ಸ್ವಾರ್ಥವಿದ್ದಂತೆ ಭಾಸವಾಗುತ್ತದೆ. ನ್ಯಾಯಬೆಲೆಯ ಟಿಕೆಟ್ ಮಾಡುವುದು ಅರ್ಥಪೂರ್ಣ ಯಾಕೆಂದರೆ ಕಾರ್ಯಕ್ರಮದ ವೆಚ್ಚವನ್ನು ಕೂಡ ಗಮನಿಸಬೇಕಲ್ಲವೇ? ಅದೇ ರೀತಿ ಕೆಲವೊಂದು ಕಾರ್ಯಕ್ರಮದಲ್ಲಿ ಆಟಿಕಳೆಂಜನ ವೇಷವನ್ನು ತಪ್ಪಾಗಿ ಧರಿಸುವುದು, ಆಟಿಯ ಕುರಿತ ಸರಿಯಾದ ಮಾಹಿತಿ ನೀಡದೆ ಇರುವುದು ನಿಜಕ್ಕೂ ಬೇಸರದ ಸಂಗತಿ.

**ಆಟಿ ತಿಂಗಳನಲ್ಲಿ ಹಮ್ಮಿಕೊಳ್ಳುವ ಕೆಲವೊಂದು ಕಾರ್ಯಕ್ರಮಗಳ ಕಿರುವಿವರ ಈ ಕೆಳಗಿನಂತಿದೆ:-**

A peep into bygone era through delicacies





ಯುವ ಪೀಳಿಗೆಗಾಗಿ 'ಆಟಿ ದಿನ'



ಕೆಎಂಸಿ: ಆಟಿದ ತಿರ್ಲ್



ಹಿಂಗಾರ ಅರಳಿಸಿ ಕಾರ್ಯಕ್ರಮವನ್ನು ಉದ್ಘಾಟಿಸಲಾಯಿತು.

ಹೊಸ ಪೀಳಿಗೆ ಆಚರಣೆಗಳನ್ನು ಮರೆಯಬಾರದು ಎನ್ನುವ ಉದ್ದೇಶದಿಂದ ಆಟಿಯ ಕಾರ್ಯಕ್ರಮಗಳು ನಡೆಯುತ್ತದೆ. ಆದರೆ ಅದು ಅರ್ಥಪೂರ್ಣವಾಗಿರಬೇಕು ಆಟಿಯ ಕುರಿತು ಸರಿಯಾದ ಮಾಹಿತಿಯನ್ನು ನೀಡುವಂತಿರಬೇಕು ಎನ್ನುವುದು ಕರ್ನಾಟಕ ತುಳು ಸಾಹಿತ್ಯ ಆಕಾಡೆಮಿಯ ಆಸೆ ಕೂಡ ತುಳು ಸಂಸ್ಕೃತಿ

ಉಳಿಯಬೇಕು ಎನ್ನುವ ಉದ್ದೇಶದಿಂದ ಮಾಡುವ ಕಾರ್ಯಕ್ರಮಗಳು ಶಿಸ್ತುಬದ್ಧವಾಗಿರಬೇಕು. ಎಲ್ಲರೂ ಮಾಡುತ್ತಾರೆ ನಾವು ಮಾಡೋಣ ಪೇಪರ್‌ನಲ್ಲಿ ಬರಲಿ ಎನ್ನುವ ಉದ್ದೇಶ ತಪ್ಪು.

ಕ್ಷೇತ್ರಕಾರ್ಯದ ಸಮಯದಲ್ಲಿ ಶ್ರೀಮತಿ ವಿಜಯಲಕ್ಷ್ಮಿಯವರು ಮೊದಲೆಲ್ಲ ಆಟಿಯ ಕಾರ್ಯಕ್ರಮದಲ್ಲಿ ಚೆನ್ನಮಣೆ ಆಟದ ಸ್ಪರ್ಧೆಯನ್ನು ಏರ್ಪಡಿಸುತ್ತಿದ್ದೆವು. ಕಾಲೇಜಿನ NSS ವಿದ್ಯಾರ್ಥಿಗಳು ಕಾರ್ಯಕ್ರಮಕ್ಕೆ ಬಂದ ಮಕ್ಕಳಿಗೆ ಚೆನ್ನಮಣೆ ಆಟವನ್ನು ಆಡಲು ಕಲಿಸುತ್ತಿದ್ದರು ಎಂದರು. ನಿಜಕ್ಕೂ ಇದನ್ನು ಮೆಚ್ಚಲೇ ಬೇಕು. ಸಾಂಸ್ಕೃತಿಕ ಕ್ರೀಡೆಯನ್ನು ಉಳಿಸುವಲ್ಲಿ ಇದೊಂದು ಉತ್ತಮ ಕಾರ್ಯ ಪ್ರಯತ್ನವೆನ್ನಬಹುದು. ಆದರೆ ಚೆನ್ನಮಣೆ ಆಟ ಆಡಲು ಪ್ರತಿವರ್ಷ ಅದೇ ಮಕ್ಕಳು ಬರುವುದು ಬೇರೆ ಮಕ್ಕಳು ಆಟವನ್ನು ಕಲಿತುಕೊಳ್ಳಲು ಆಸಕ್ತಿ ತೋರಿಸದ ಕಾರಣ ಚೆನ್ನಮಣೆ ಆಟದ ಸ್ಪರ್ಧೆಯನ್ನು ಈ ವರ್ಷ ಮಂಗಳೂರಿನ ಪಿಲಿಕುಳದಲ್ಲಿ ನಡೆಯುವ ಆಟಿಯ ಕಾರ್ಯಕ್ರಮದಲ್ಲಿ ಹಮ್ಮಿಕೊಳ್ಳಲಿಲ್ಲ ಬದಲಿಗೆ ಮಳೆಯಾಟ (ಮಳೆ ನೀರಿನಲ್ಲಿ ದೋಣಿ ಮಾಡಿ ಬಿಡುವ ಸ್ಪರ್ಧೆ) ಕೆಸರ್‌ಡ್ ಒಂಜಿ ದಿನ (ಕೆಸರಲ್ಲಿ ಒಂದು ದಿನ) ಹಮ್ಮಿಕೊಳ್ಳಲಾಯಿತು ಎಂದರು.



ಸಾರ್ವಜನಿಕರಿಗೆ ಉಚಿತ ಕಷಾಯ

[illegible]

ಹಾಲೆರಸ ಕುಡಿಯುವುದನ್ನು ಮರೆತಿರುವ ಸಂದರ್ಭದಲ್ಲಿ ಅದು ಕೈಗೆ ಎಟಕುವಂತೆ ಆಟಿ ಅಮಾವಸ್ಯೆಯ ದಿನ ಕೆಲವೊಂದು ದೇವಸ್ಥಾನಗಳಲ್ಲಿ, ಮಂಗಳೂರಿನ ಹಂಪನಕಟ್ಟೆಯ ಬಳಿ ಇರುವ ಸಾಹಿತ್ಯ ಕೇಂದ್ರ ಸಾವಯುವ ಬಳಗದಲ್ಲಿ, ಹಾಗೂ ವೇದಂ ಆಸ್ಪತ್ರೆ, ಪಾಂಡೇಶ್ವರ (ಆಯುರ್ವೇದಿಕ್ ಆಸ್ಪತ್ರೆ)ಯಲ್ಲಿ ಹಾಲೆರಸದ ಮದ್ದನ್ನು ನೀಡುತ್ತಾರೆ. ಅಷ್ಟೇ ಅಲ್ಲದೇ ೩೦.೦೭.೨೦೧೭ರಂದು International Bunts Welfare Trust ನಿಂದ 'ಮರಿಯಾಲದ ಮಿನದನ' ಎನ್ನುವ ತುಳು ಸಾಂಸ್ಕೃತಿಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಈ ಕಾರ್ಯಕ್ರಮದಲ್ಲಿ ಆಟಿ ಆಚರಣೆ ಹಾಗೂ ತುಳು ಸಂಸ್ಕೃತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಈಗಿನ ವಿದ್ಯಾರ್ಥಿಗಳಲ್ಲಿ 'ಆಟಿಡ್ ಒಂಜಿ ದಿನ' ಎಂದರೇನು ಎಂದು ಪ್ರಶ್ನಿಸಿದಾಗ "ಅದು ಎಲ್ಲರೂ ಒಟ್ಟಾಗಿ ಬಗೆಬಗೆಯ ತಿಂಡಿಗಳನ್ನು ತಿನ್ನುವುದು' ಎನ್ನುವ ಉತ್ತರ ಸಿಕ್ಕಾಗ ಆಶ್ಚರ್ಯವಾಯಿತು. ಆಟಿ ಆಚರಣೆ ಎಂದರೆ ಬರೀ ತಿನ್ನುವುದು ಎನ್ನುವ ಮಾಹಿತಿ ವಿದ್ಯಾರ್ಥಿಗಳಿಗೆ ಕೊಡದೆ ಆಟಿಯ ಕುರಿತ ಸಂಪೂರ್ಣ ಜ್ಞಾನ ಕೊಟ್ಟರೆ ಮಾತ್ರ ಆಚರಣೆ ಸಂಸ್ಕೃತಿ ಮುಂದುವರಿಯುವುದು.

# ಅಧ್ಯಾಯ – ೮

## ಉಪಸಂಹಾರ

ಈ ಅಧ್ಯಯನದ ಹಿನ್ನೆಲೆಯಲ್ಲಿ ಆಟಿ (ಆಷಾಢ)ಯ ಕುರಿತಾಗಿ ಆಟಿ (ಆಷಾಢ) ಸಾಂಸ್ಕೃತಿಕ ಹಿನ್ನೆಲೆಯ ಕುರಿತಾಗಿ ಈ ಕೆಳಗಿನ ನಿರ್ಣಯಗಳಿಗೆ ಇರಬಹುದಾಗಿದೆ.

೧. ಆಟಿ ತಿಂಗಳ ಕುರಿತಾಗಿ ತುಳು ಜಾನಪದದ ಹಿನ್ನೆಲೆಯಲ್ಲಿ ಕೆಲವು ಗ್ರಂಥಗಳು ಮತ್ತು ಲೇಖನಗಳು ಪ್ರಕಟವಾಗಿವೆ. ಆದರೆ ಅವು ಕೇವಲ ಮಾಹಿತಿ ಸಂಗ್ರಹ ಮತ್ತು ವಿವರಣಾತ್ಮಕ ವಿಶ್ಲೇಷಣೆಗೆ ಮಾತ್ರ ಸೀಮಿತವಾಗಿದೆ. ಇದರಿಂದ ವಿವರವಾಗಿ ವೈಜ್ಞಾನಿಕ ಕ್ಷೇತ್ರ ಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ ಸೈದ್ಧಾಂತಿಕವಾದ ಅಧ್ಯಯನ ನಡೆಸುವ ಅಗತ್ಯವನ್ನು ಈ ಅಧ್ಯಯನವು ಸ್ಪಷ್ಟಪಡಿಸಿದೆ.

೨. ಆಟಿಕಳೆಂಜ ಆಚರಣೆಯು ಆಟಿ ತಿಂಗಳ ಪ್ರಾಕೃತಿಕ ಪರಿಸರಕ್ಕೂ ನಿಕಟವಾದ ಸಂಬಂಧವಿದೆ. ಆಟಿಯ ಅನಿಷ್ಟಗಳನ್ನು ಓಡಿಸುವ ಮಾಂತ್ರಿಕ ಶಕ್ತಿಯಾಗಿ ಆಟಿ ಕಳೆಂಜ ಕುಣಿತದ ಸ್ವರೂಪದಲ್ಲಿ ಕಂಡುಬರುತ್ತದೆ. ಆಟಿ ತಿಂಗಳ ಪ್ರಾಕೃತಿಕ ಪರಿಸರವೇ ಆಟಿ ಕಳೆಂಜ ಕುಣಿತ ಸ್ವರೂಪವನ್ನು ನಿರ್ಣಯಿಸಿದೆ. ಒಂದು ರೀತಿಯಲ್ಲಿ ಆಟಿ ಕಳೆಂಜನು ತುಳುನಾಡಿನ ಸಾಮಾಜಿಕ ಮತ್ತು ಧಾರ್ಮಿಕ ಹಿನ್ನೆಲೆಯನ್ನು ಪ್ರತಿನಿಧಿಸುವ ವ್ಯಕ್ತಿಯಾಗಿಯೂ ಕಂಡುಬರುತ್ತಾನೆ.

೩. ತುಳುನಾಡಿನ ಪ್ರಮುಖ ಜನಪದ ಆಟವಾದ ಚೆನ್ನೆಮಣೆ ಆಟಿಕಾಲದ ಅರ್ಥ ಮತ್ತು ಕಾರ್ಯಕ್ಕೆ ಸಾಂಕೇತಿಕವಾಗಿ ನಿಲ್ಲುತ್ತದೆ. ಆಟಿ ತಿಂಗಳಲ್ಲಿ ಧಾರಕಾರವಾಗಿ ಸುರಿಯುವ ಮಳೆಯಿಂದಾಗಿ ಕೃಷಿಯ ವಿರಾಮವನ್ನು ಈ ಆಟದ ಮೂಲಕ ಕಳೆಯಲಾಗುತ್ತದೆ ಎಂದು ಮೇಲ್ನೋಟಕ್ಕೆ ಕಂಡು ಬಂದರೂ ತುಳುನಾಡಿನ ರಾಜಕೀಯ, ಸಾಮಾಜಿಕ, ವ್ಯವಹಾರಿಕ ಹೀಗೆ ಒಟ್ಟು ಸಾಂಸ್ಕೃತಿಕ ಸ್ವರೂಪವನ್ನು ಈ ಆಟದ ಮೂಲಕ ವಿವರಿಸಲು ಸಾಧ್ಯವಾಗುತ್ತದೆ. ಆಟಗಳು ಕೇವಲ ಮನರಂಜನೆಗಾಗಿ ಮಾತ್ರ ಇರುವುದಲ್ಲ, ಅವು ಪರಿಣಾಮಕಾರಿ ಸಾಮಾಜಿಕ ಸಂವಹನ ಮಾಧ್ಯಮಗಳು ಎಂಬುವುದನ್ನು ಈ ಅಧ್ಯಯನವು ನಿರೂಪಿಸಿದೆ.

೪. ಆಟಿ ಆಚರಣೆಗೆ ಸಂಬಂಧಿಸಿದ ನಂಬಿಕೆಗಳು ಆಷಾಢ ಮಾಸದ ಆರ್ಥಿಕತೆ ಮತ್ತು ಸಾಮಾಜಿಕ ಸಂಬಂಧಗಳ ಸ್ವರೂಪವನ್ನು ಸ್ಪಷ್ಟಪಡಿಸುತ್ತದೆ. ಆಟಿ ಕುಲ್ಲುನಿ ಮೊದಲಾದ ಆಟಿ ಆಚರಣೆಗಳ ಮೂಲಕ ಇದನ್ನು ಸ್ಪಷ್ಟಪಡಿಸಲಾಗಿದೆ. ಆಟಿ ಕಳೆಂಜ ಮನುಷ್ಯನಿಗೆ ಬರುವ ದೂರ ಮಾಡುತ್ತಾನೆ ಎಂಬ ನಂಬಿಕೆಯಿದ್ದರೆ ಕಳ್ಳಿಕಾಪು ಕುತ್ತುವುದು ಕೃಷಿ ಮಾಡುವ ಗದ್ದೆಗಳ ಭತ್ತಕ್ಕೆ ಬರುವ ರೋಗಗಳನ್ನು ದೂರ ಮಾಡುವುದನ್ನು ಸಾಂಕೇತಿಸುತ್ತದೆ. ಒಟ್ಟಿನಲ್ಲಿ ಈ ಕಾಲದ ಆಚರಣೆಗಳಲ್ಲಿ ಜನಪದರ ವಿಶಿಷ್ಟ ಲೋಕದೃಷ್ಟಿಯನ್ನು ಗಮನಿಸಬಹುದಾಗಿದೆ.

೫. ತುಳುನಾಡಿನಲ್ಲಿ ಆಟಿ ತಿಂಗಳ ಆಹಾರ ಪದ್ಧತಿ ವಿಶಿಷ್ಟವಾಗಿದೆ. ಅಂದಿನ ಕಾಲದ ಪ್ರಾಕೃತಿಕ ಸ್ವರೂಪಕ್ಕೂ ಈ ತಿಂಗಳ ಆಹಾರ ಪದ್ಧತಿಗೂ ನಿಕಟವಾದ ಸಂಬಂಧವಿರುವುದನ್ನು ಗಮನಿಸಬಹುದಾಗಿದೆ. ಈ ಆಹಾರಗಳು ಪಾರಂಪರಿಕ ವೈದ್ಯಕೀಯ ನಂಬಿಕೆಗಳ ಹಿನ್ನೆಲೆಯಲ್ಲಿಯೇ ಕ್ರಿಯಾಶೀಲವಾಗಿರುವುದನ್ನು ಗಮನಿಸಬಹುದಾಗಿದೆ.

೬. ಒಟ್ಟಿನಲ್ಲಿ ಆಟಿ ತಿಂಗಳ ಎಲ್ಲಾ ಸಾಂಸ್ಕೃತಿಕ ವಿಷಯಗಳ ಸ್ವರೂಪ ನಿರ್ಣಯದಲ್ಲಿ ಅಲ್ಲಿನ ಪ್ರಾಕೃತಿಕ ಪರಿಸರ ಕಾರ್ಯನಿರ್ವಹಿಸಿದೆ ಎಂಬುವುದು ಸ್ಪಷ್ಟವಾಗುತ್ತದೆ. ಆಟಿ ಕಳೆಂಜ, ಚೆನ್ನೆಮಣೆ ಆಟ, ಆಟಿಯ ಆಹಾರ ಪದ್ಧತಿ, ಆಟಿಯ ಆಚರಣೆಗಳು ಎಲ್ಲದರಲ್ಲೂ ಇದನ್ನು ಗುರುತಿಸಬಹುದಾಗಿದೆ. ಪ್ರಕೃತಿಗೂ ಸಂಸ್ಕೃತಿಗೂ ಇರುವ ನಿಕಟ ಸಂಬಂಧ ಆಟಿಯ ಆಚರಣೆ ಮತ್ತು ಭೌಗೋಳಿಕ ಪರಿಸರಕ್ಕಿರುವ ಸಂಬಂಧವನ್ನು ವಿಶ್ಲೇಷಿಸಿದಾಗ ಈ ಅಂಶ ಕಂಡುಬರುತ್ತದೆ.

೭. ಆಧುನಿಕ ಸಂದರ್ಭದಲ್ಲ ಕೌಟುಂಬಿಕವಾಗಿದ್ದ ಆಟಿಯ ಆಚರಣೆ ಸಾರ್ವಜನಿಕ ಆಚರಣೆಯಾಗುತ್ತಿರುವ ಸ್ಥಿತ್ಯಂತರವನ್ನು ಈ ಅಧ್ಯಯನದಲ್ಲಿ ವಿವರಿಸಲಾಗಿದೆ. ಒಟ್ಟಿನಲ್ಲಿ ಈ ಬಗ್ಗೆ ಆಳವಾಗಿ ಅಧ್ಯಯನ ನಡೆಸುವ ಅಗತ್ಯವಿದೆ ಎನ್ನುವುದನ್ನು ಈ ಅಧ್ಯಯನವು ನಿರೂಪಿಸಿದೆ.

## ಪರಾಮರ್ಶನ ಗ್ರಂಥಗಳು

1. ಅಭಯಕುಮಾರ್ ಕೌಕ್ರಾಡಿ : ಮುಗೇರರು – ಜನಾಂಗ – ಜಾನಪದ ಅಧ್ಯಯನ
2. ಅರವಿಂದ ಮಾಲಗತ್ತಿ : ತುಳುವರ ಆಟಿ ಕಳಂಜ (ಅಂತರಾಷ್ಟ್ರೀಯ ಸಂಶೋಧನೆ) ಹೇಮಾಂಶು ಪ್ರಕಾಶನ 1993
3. ಅಶೋಕ್ ಎನ್ ಕಡೆಶಿವಾಲಯ: ಆಟಿಡೊಂಜಿ ಮೋಕೆದೋಲೆ (ಪುಟ ಸಂಖ್ಯೆ ೫೫, ಮದಿಪು ೧೯೯೯)
4. ಆಟಿ ಸೋಣ ನಿರ್ನಾಲ (ತ್ರೈಮಾಸಿಕ): ಆಟಿದ ಅಗೆಲ್ ಸೋಣದ ಪರ್ಬ (೧೯೯೭)
5. ಬಿ.ತಮ್ಮಯ್ಯ ಬಿ.ಸಿ.ರೋಡ್. : ಆಟಿ ತುಳುನಾಡ್ ನುಡಿ ಸಂಸ್ಕೃತಿಗ್ ಎದುರಾತಿನ ಕಂಟಕಲು (ಮದಿಪು ಸಂಪುಟ ೧ ಸಂಚಿಕೆ ೨೮ ಜುಲೈ ೨೦೧೫)
6. ಬಿ.ಎ. ವಿವೇಕ ರೈ : ಅನ್ವಯಿಕ ಜಾನಪದ, ಕರ್ನಾಟಕ ಸರಕಾರ, ಕನ್ನಡ ಪುಸ್ತಕ ಪ್ರಾಧಿಕಾರ ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು
7. ಬಿ.ಎ.ವಿವೇಕ ರೈ : ತುಳು ಸಾಹಿತ್ಯ ಚರಿತ್ರೆ (೨೦೦೭) ಪ್ರಸರಾಂಗ (ಕನ್ನಡ ವಿಶ್ವವಿದ್ಯಾನಿಲಯ ಹಂಪಿ)(ಪುಟ ಸಂಖ್ಯೆ ೬೦೭)
8. ಭಾಸ್ಕರ ರೈ ಕುಕ್ಕುವಳ್ಳಿ : ನೇಯಿ –ಪೇರ್ (ಪುಟ ಸಂಖ್ಯೆ ೧೦೭)
9. ಭಾಸ್ಕರ ರೈ ಕುಕ್ಕುವಳ್ಳಿ : ಆಟಿದ ಮಲಕಂತ (೨೦೧೧)
10. ಬನ್ನಂಜೆ ಬಾಬು ಅಮೀನ್ : ಆಟಿ ಸೋಣ, ಕೆಮ್ಮಲಜೆ, ಜಾನಪದ ಪ್ರಕಾಶನ ನಿಟ್ಟೂರು, ಉಡುಪಿ –೩
11. ಕ್ಯಾಥರಿನ್ ರಾಡ್ರಿಗಸ್ : ಆಟಿದಕ್ಕೆ (ಪುಟ ಸಂಖ್ಯೆ ೧೦೯)
12. ಚಿನ್ನಪ್ಪ ಕೆ.ಗೌಡ : ಸೇರಿಗೆ (ಪುಟ ಸಂಖ್ಯೆ ೩೦೪)
13. ಚಂದ್ರಶೇಖರ ಬೋಳೂರು : ಆಟಿ ತಿಂಗಳ ತಿನಿಸುಗಳು ಲೇಖನ (ಮದಿಪು ೨೦೦೫)
14. ದಿವಾ ಕೊಕ್ಕಡ : ತುಳುನಾಡಿನ ಆಚರಣೆಗಳು, ವಾರ್ಷಿಕ ಆವರ್ತನದ ಸಾಂಸ್ಕೃತಿಕ ಅಧ್ಯಯನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಜೂನ್ 2013.

15. ಗಣನಾಥ ಎಕ್ಕಾರು : ತುಳುನಾಡಿನ ಜನಪದ ಆಟಗಳು, ೨೦೦೦, ಜ್ಞಾನದೀಪ ಪ್ರಕಾಶನ ಬೆಂಗಳೂರು, ನೃಪತುಂಗ ರಸ್ತೆ, ಬೆಂಗಳೂರು – ೨ ಮತ್ತು ಕರ್ನಾಟಕ ತುಳು ಸಾಹಿತ್ಯ ಆಕಾಡೆಮಿ, ಲಾಲ್‌ಬಾಗ್, ಮಂಗಳೂರು – ೩ ಮತ್ತು ಕನ್ನಡ ಸಂಸ್ಕೃತಿ ನಿರ್ದೇಶನಾಲಯ

16. ಜಾನಕಿ ಎಂ. ಬ್ರಹ್ಮಾವರ : ಆಟಿಡೊಂಜಿ ದಿನ (೧೯೯೮)

17. ಜಾನಕಿ ಎಂ.ಬ್ರಹ್ಮಾವರ : ಆಟಿ ಕುಲ್ಲುದೊಲು

18. ಜಾನಕಿ ಎಂ. ಬ್ರಹ್ಮಾವರ : ಆಟಿಡೊಂಜಿ ದಿನ (೧೯೯೮)

19. ಜಾನಕಿ ಎಂ.ಬ್ರಹ್ಮಾವರ : ಅಟಿಡ್ ಎಂಚಗೆ (ಪುಟ ಸಂಖ್ಯೆ ೧೩, ಮದಿಪು ೨೦೦೨)

20. ಜಾನಕಿ ಎಂ.ಬ್ರಹ್ಮಾವರ : ಅಟಿಡ್ ಎಂಚಗೆ (ಪುಟ ಸಂಖ್ಯೆ ೧೩. ಮದಿಪು ೨೦೦೨)

21. ಕೆ.ಕೆ.ಗಟ್ಟಿ : ಆಟಿದ ಮರಿಯಾಲ (೨೦೦೩)

22. ಕೃಷ್ಣಪ್ರಸಾದ್ ಕುಂಬ್ಳೆ : ಆಟಿ (ಪುಟ ಸಂಖ್ಯೆ ೧೧೩)

23. ಕೆ.ಮಹೇಂದ್ರನಾಥ್ ಸಾಲೆತ್ತೂರು: ಆಟಿ ಕುಲ್ಲೆರೆ (ಮದಿಪು ೨೦೧೧ ಪುಟ ಸಂಖ್ಯೆ ೨೨)

24. ಲಲಿತಾ ರೈ : ತುಳುವೆರೆ ಆಟಿ ತಿಂಗೊಲ್ (೨೦೦೧)

25. ನಳಿನಿ ಬಿ. ರೈ : ಆಟಿಡೊಂಜಿ ದಿನ (ಪುಟ ಸಂಖ್ಯೆ ೧೭ ಮದಿಪು ೨೦೧೨)

26. ಪಾಲ್ತಾಡಿ ರಾಮಕೃಷ್ಣ ಆಚಾರ್ : ತುಳು ಸಂಸ್ಕೃತಿದ ಪೊಲಬು

27. ಪೂವರಿ ತಿಂಗೊಲ್ದ ತುಳು ಪತ್ರಿಕೆ ಜುಲೈ – 2016

28. ಮೂವಪ್ಪ ಕಣಿ : ಸಿರಿಸಂಪದ ಲೇಖನಾ – 2014

29. ರಾಜೇಂದ್ರ ಕೆ.ಅಡಿಗ : ತುಳುವೆರ್ (೨೦೦೮)

30. ಸಾಯಿಗೀತಾ : ತುಳುವೆರೆ ತೆನೆಸ್ ಅಸರ್‌ದ ಪೊರ್ಲು ತೆರ್ಲ್

31. ಎಸ್ ಎಚ್ ಶಿವರುದ್ರಪ್ಪ. : ಆಟಿಡೊಂಜಿ ಬರ್ಸ (ಪುಟ ಸಂಖ್ಯೆ ೨೨ –೨೪, ಮದಿಪು ೨೦೦೨)

32. ಸುದರ್ಶನ ಸಂ ಅಡ್ಯನಡ್ಕ ಕೃಷ್ಣಭಟ್ಟ: ಟಿ.ಎಂ.ಪೈ ಅಭಿನಂದನಾ ಗ್ರಂಥ ವಿಜಯ ಕಾಲೇಜ್ ಟ್ರಸ್ಟ್ ಮುಲ್ಕಿ

33. ಸುಮಂತ್ ಶೆಟ್ಟಿ : ಕುಧ್ಕಗ್ ಮದಿಮೆಗೆ (ಮದಿಪು ತ್ರೈಮಾಸಿಕ ಕರ್ನಾಟಕ ತುಳು ಸಾಹಿತ್ಯ ಆಕಾಡೆಮಿ)

34. ಸುನೀತಾ ಎಂ ಶೆಟ್ಟಿ : ಪ್ರಸರಾಂಗ ಕರ್ನಾಟಕ ಪಠ್ಯ ಪುಸ್ತಕ ಸಂಘ (ರಿ) ತುಳು ಎಸಲ್ ೩ ಪುಟ ಸಂಖ್ಯೆ ೩೪ (ಆಟಿ)

35. ಉಡಲ್ ತ್ರೈಮಾಸಿಕ ಪತ್ರಿಕೆ –2016

36. ಯು.ಪಿ. ಉಪಧ್ಯಾಯ : Folk rituals of the Tuluva Region of Coastal Karnataka

37. ವಾಮನ ನಂದಾವರ : ನಾಗರ ಪಂಚಮಿ ಆಟಿ ಅಮಾವಾಸ್ಯೆ (೨೦೦೪)

38. ವಾಮನ ನಂದಾವರ : ಜನಪದ ಸುತ್ತಮುತ್ತ (೧೯೯೨) ಪ್ರಜಾಬಂಧು ಪ್ರಕಾಶನ, ನೊಯೆಲ್ಲಾ ಬಿಲ್ಡಿಂಗ್, ಹಂಪನಕಟ್ಟೆ, ಮಂಗಳೂರು –೧

39. ವಾಮನ ನಂದಾವರ : ಆಟಿ ಕಳೆಂಜ (ಮದಿಪು ೨೦೦೪)(ಪ್ರಸರಾಂಗ ಕರ್ನಾಟಕ ತುಳು ಸಾಹಿತ್ಯ ಆಕಾಡೆಮಿ, ಮಂಗಳೂರು ಪುಟ ಸಂಖ್ಯೆ ೪೭ ರಿಂದ ೫೦

## ವರದಿಗಳು

40. ಅಶೋಕ್ ಎನ್ ಕಡೆಶಿವಾಲಯ : ಆಟಿಡೊಂಜಿ ಮೋಕೆದೋಲೆ (ಕಾರವಲ್ ಪತ್ರಿಕೆ ೧೨

41. ಡೆಕ್ಕನ್ ಹೆರಾಲ್ಡ್ : ಎ ಪೀಪ್ ಇನ್ ಟು ಬೈಗೋನ್ ಎರಾ ಥ್ರೂ ಡೆಲಿಕೆಸಿಸ್

42. ದುಗ್ಗಪ್ಪ ಕಜೆಕಾರ್ : ಆಡೊಂದು ಬತ್ತ್‌ಂಡ್ ಆಟಿ : ಈ ಸರ್ತಿ ಎಂಚಗೆ (ವಿಜಯ ಕರ್ನಾಟಕ), ೧೫ ಜುಲೈ ೨೦೧೪

43. ಹರಿಪ್ರಸಾದ್ ಸುವರ್ಣ : ಆಟಿ ಅಮಾವಾಸ್ಯೆಯ ಹಾಲೆ ಕಷಾಯಕ್ಕೆ ರೆಡಿಯಾಗಿ

44. ಕದ್ರಿ ನವನೀತ ಶೆಟ್ಟಿ : ಆಟಿದ ನಡುಟೊಂಜಿ ಗುಣು ಗುಣು (ವಿಜಯ ಕರ್ನಾಟಕ ೫ ಆಗಸ್ಟ್ ೨೦೧೪)

45. ಪ್ರಕಾಶ್ ಮುಳ್ಳೇರಿಯ : ಇಲ್ಲಿ ಆಟಿಯಲ್ಲೇ ಕೋಲ (ವಿಜಯ ಕರ್ನಾಟಕ) ಆಗಸ್ಟ್ ೨೦೦೮)

46. ಪ್ರಜಾವಾಣಿ : ಯುವಪೀಳಿಗೆಗಾಗಿ "ಆಟಿ ದಿನ" (ಭಾನುವಾರ ೨೮ ಜುಲೈ ೨೦೧೩) (ಜುಲೈ ೨೮ ೨೦೧೩)

47. ರಘುನಾಥ್ ಪಯ್ಯೊಳಿ : ಆಧುನಿಕ ಕಾಲೊಡ್ ಆಟಿದ ಲೆಕ್ಕ ತಿಕ್ಕುಂಡ? (ವಿಜಯ ಕರ್ನಾಟಕ ೧೫ ಜುಲೈ ೨೦೧೪)

48. ಶರತ್ ಕುಮಾರ್ ತೋನ್ಸೆ : ಆಟಿಡ್ ಬರ್ಪಿನೊ ಕಳೆಂಜೆ ಮಾರಿ ಕಳೆಪಿನೊ (ವಿಜಯ ಕರ್ನಾಟಕ, ೫ ಆಗಸ್ಟ್ ೨೦೧೪)

49. ಉದಯವಾಣಿ : ಆಟಿ ತಿಂಗೊಲ್ ಬಕ ಆಯುರ್ವೇದ (ಆಗಸ್ಟ್ ೧೨ ೨೦೧೬)

## ಅಂತರ್ಜಾಲ ತಾಣಗಳು

1. www.canaranews.com
2. www.daijiworld.com
3. https://en.wikipedia.org/wiki/Ali_Guli_Mane
4. https://buntsinfomedia.com › Panthada Gobbulu
5. www.mangalorean.com
6. www.sswroshni.in
7. www.thehindu.com
8. www.tuluworld.org/aboutus.htm

## ಶಬ್ದಕೋಶ ಮತ್ತು ನಿಘಂಟುಗಳು

೧. ಇಂಗ್ಲೀಷ್ – ಕನ್ನಡ ಶಬ್ದಕೋಶ, ೧೯೬೫ : ದ್ವಿತೀಯ ಮುದ್ರಣ, ಮೈಸೂರು

೨. ಯು.ಪಿ ಉಪಾಧ್ಯಾಯ (ಸಂ) ೧೯೯೨ : ತುಳು ನಿಘಂಟು : ಸಂಪುಟ ೨, ಗೋವಿಂದ ಪೈ, ಸಂಶೋಧನ ಕೇಂದ್ರ ಉಡುಪಿ

೩. ಯು.ಪಿ ಉಪಾಧ್ಯಾಯ ೧೯೮೮ : ತುಳು ನಿಘಂಟು : ಸಂಪುಟ, ಗೋವಿಂದ ಪೈ ಸಂಶೋಧನ ಕೇಂದ್ರ ಉಡುಪಿ,

೪. ಕನ್ನಡ ವಿಶ್ವಕೋಶ ೧೯೭೦ : ಸಂಪುಟ ೧

